# ಚಿನ್ನದಗಿರಿ ಯಾತ್ರೆ

ಜೆ. ವೆಂಕಟಯ್ಯ



# ಚಿನ್ನದಗಿರಿ ಯಾತ್ರೆ

ಜಿ. ವೆಂಕಟಯ್ಯ

ಪ್ರಕಾಶಕರು

**ಶ್ರೀ ಎಸ್. ಕೆ. ಕಾಂತಾವರ್**

**೫೮, ನಜರ್‌ಬಾದ್ : : ಮೈಸೂರು**

# ಮುನ್ನುಡಿ

ಕ್ಷೇತ್ರಯಾತ್ರೆಯೊಂದನ್ನು ವಿಷಯವಾಗುಳ್ಳ ಈ ಪುಸ್ತಕದ ಕರ್ತೃ ವಾದ ಶ್ರೀ ಜಿ. ವೆಂಕಟಯ್ಯನವರಿಗೂ ನನಗೂ ಪರಿಚಯವಾದದ್ದು ಒಂದು ಮುದ್ರಣಾಲಯದಲ್ಲಿ. ಆಗ್ಗೆ ಅವರ ಕೃತಿ "ಮುರಿದ ಮದುವೆ" ಎಂಬ ಕಥೆಯ ಪುಸ್ತಕ ಅಲ್ಲಿ ಅಚ್ಚಾಗುತ್ತಿತ್ತು. ಅದೇ ಸಮಯದಲ್ಲಿ ನನ್ನದೂ ಒಂದು ಪುಸ್ತಕ ಅಚ್ಚಾಗುತ್ತಿತ್ತು. ಅಂದಿನಿಂದ ಶ್ರೀ ವೆಂಕಟಯ್ಯ ನವರು ನನ್ನ ವಿಷಯದಲ್ಲಿ ಬಹು ಸವಿಯಾದ ವಿಶ್ವಾಸವನ್ನೂ, ನನ್ನ ಯೋಗ್ಯತೆಗೆ ಸ್ವಲ್ಪಮಟ್ಟಿಗೆ ಮೀರಿದ ಗೌರವವನ್ನೂ ತೋರುತ್ತಾ ಬಂದಿದ್ದಾರೆ.

ಶ್ರೀ ವೆಂಕಟಯ್ಯನವರು ಕೆಲವು ತಿಂಗಳುಗಳ ಹಿಂದೆ ಕುಟುಂಬ ಸಮೇತ ತಮ್ಮ ಕುಲದೈವವಾದ ಶ್ರೀ ತಿರುಪತಿ ವೆಂಕಟಾಚಲಪತಿಯ ಸನ್ನಿಧಿಗೆ ಯಾತ್ರೆ ಹೋಗಿಬಂದರು. ಹಿಂತಿರುಗಿದೊಡನೆಯೇ ನನ್ನನ್ನು ಕಂಡು, ತಮ್ಮ ಯಾತ್ರಾ ಪ್ರವಾಸವನ್ನು ಕುರಿತು ಒಂದು ಪುಸ್ತಕವನ್ನು ಬರೆಯಬೇಕೆಂದಿರುವುದಾಗಿ ತಿಳಿಸಿದರು. ಅಲ್ಲದೆ ಈ ಕೆಲಸಕ್ಕೆ ಹೇಗೆ ತೊಡಗಬೇಕು? ಎಂದು ನನ್ನ ಸಲಹೆಯನ್ನು ಕೇಳಿದರು. ನಾನು ನನ್ನ ಅಲ್ಪಮತಿಗೆ ತೋರಿದ ಕೆಲವು ಸಲಹೆಗಳನ್ನು ಕೊಟ್ಟು ಕೃತಿಯ ರಚನೆಯನ್ನು ಪ್ರಾರಂಭಿಸುವಂತೆ ಹೇಳಿದೆ. ಅದರ ಫಲ ಇದೇ "ಚಿನ್ನದಗಿರಿ ಯಾತ್ರೆ" ಎಂಬ ಈ ಪುಸ್ತಕ.

ವಸ್ತುಸಂಗ್ರಹ, ಪಾತ್ರರಚನೆ, ವಿಷಯದ ಪ್ರಾರಂಭ, ಬೆಳವಣಿಗೆ, ಮುಕ್ತಾಯ ಇವುಗಳ ಸಂಬಂಧವಾಗಿ ಕಥೆ, ಕಾದಂಬರಿ, ನಾಟಕಗಳಲ್ಲಿರುವ ನಿಯಮ ನಿರ್ಬಂಧ, ಪ್ರವಾಸರಚನೆಯಲ್ಲಿರುವುದಿಲ್ಲ. ಅಂದಮಾತ್ರಕ್ಕೆ ಪ್ರವಾಸ ಸಾಹಿತ್ಯರಚನೆ ಬಹಳ ಸುಲಭ ಎಂದಲ್ಲ. ಪ್ರವಾಸ ಹೊರಟ ಮನುಷ್ಯನಿಗೆ, ತಾನು ಮನೆ ಬಿಟ್ಟು ಹೊರಟಾಗಿನಿಂದ ಪುನಃ ಮನೆ ಸೇರುವ ವರೆಗೂ, ಅವನು ಕಂಡ ನೋಟಗಳು, ಘಟನೆಗಳು, ಜನಗಳು, ಕೇಳಿದ ಮಾತುಕಥೆಗಳು, ಅನುಭವಿಸಿದ ಆನಂದ, ಸುಖ, ಕಷ್ಟ, ತಾಪತ್ರಯಗಳು ಇವೇ ವಸ್ತು. ಈ ವಸ್ತುವನ್ನು ಪ್ರವಾಸಿಗನು ಒಂದು ತೆರನ ನಿರ್ಲಿಪ್ತತೆ

ಯಿಂದ ನೋಡಿ, ಕೇವಲ ಚಾರಿತ್ರಿಕ ದಾಖಲೆಗಳಂತೆ ಬರೆದರೆ ಅಂತಹ ಕೃತಿ ರುಚಿಹೀನವಾಗುವ ಸಂಭವವೇ ಹೆಚ್ಚು. ಅದರ ಬದಲು ತಲ್ಲೀನತೆಯಿಂದ ಸಹಾನುಭೂತಿಯಿಂದ ನೋಡಿ ಬರೆದರೆ ಅಂತಹ ಕೃತಿಯಲ್ಲಿ, ಕಥೆ ಕಾದಂಬರಿಗಳ ರುಚಿಯೂ ಪರಿಮಳವೂ ತೋರಿ ಬರವಣಿಗೆಯು ಸಾಹಿತ್ಯದ ಮಟ್ಟಕ್ಕೆ ಏರುತ್ತದೆ. ಇಲ್ಲಿ ಕೃತಿಯ ವಸ್ತುವನ್ನು ನೋಡುವ ದೃಷ್ಟಿ—ಬಾಹ್ಯಪ್ರಚೋದನೆಯಿಂದ (ಅದು ಪ್ರಕೃತಿ ದೃಶ್ಯವೇ ಆಗಿರಲಿ, ಜನತೆಯೇ ಆಗಿರಲಿ, ಘಟನೆಯೇ ಆಗಿರಲಿ, ಮಾತುಗಳೇ ಆಗಿರಲಿ) ನೋಡುವವನಲ್ಲುಂಟಾಗುವ ಪ್ರತಿಕ್ರಿಯೆ ಮುಖ್ಯ. ಅವನ ದೃಷ್ಟಿ ಎಷ್ಟು ತೀಕ್ಷ್ಣವಾದರೆ, ಅವನ ಪ್ರತಿಕ್ರಿಯೆ ಎಷ್ಟು ತೀವ್ರವಾದರೆ, ಅಂತಹವನ ಕೃತಿ ಅಷ್ಟು ಅಷ್ಟು ರಸಪೂರ್ಣವಾಗುತ್ತದೆ.

ಸಾಹಿತಿ ಜನತೆಯ ಕಣ್ಣು, ಕಂಠ. ನನ್ನ ಮಿತ್ರರಾದ ಶ್ರೀ ಜಿ. ವೆಂಕಟಯ್ಯನವರು ನಮ್ಮ ಜನತೆಯ ಕಣ್ಣಾಗಬಲ್ಲರು, ಕಂಠವಾಗಬಲ್ಲರು ಎಂದು ನನಗೆ ದೃಢವಾದ ನಂಬಿಕೆಯಿದೆ. "ಚಿನ್ನದಗಿರಿ ಯಾತ್ರೆ" ಎಂಬ ಈ ಕೃತಿಯನ್ನು ಓದುವವರಿಗೂ ಇದೇ ಭರವಸೆ ಕಾಣುವುದೆಂದು ನಾನು ನಂಬುತ್ತೇನೆ. ಈ ಪುಸ್ತಕದಲ್ಲಿ ಅವರು ತಮ್ಮ ಕ್ಷೇತ್ರಯಾತ್ರೆಯನ್ನು ಸಮಯೋಚಿತವಾದ ವರ್ಣನೆ, ವ್ಯಾಖ್ಯಾನಗಳೊಡನೆ ಸರಳವಾದ ಶೈಲಿಯಲ್ಲಿ ಹೃದಯಂಗಮವಾಗಿ ನಿರೂಪಿಸಿದ್ದಾರೆ. ಇದನ್ನು ಓದಿ ಮುಗಿಸಿದ ಮೇಲು ನನಗಂತೂ ಮಾನಸಿಕವಾಗಿ, ಶ್ರೀ ವೆಂಕಟಾಚಲಪತಿಯ ಸಾನ್ನಿಧ್ಯಕ್ಕೆ ಯಾತ್ರೆ ನಡೆಸಿದಷ್ಟೇ ಸುಖವಾಯಿತು. ಈ ಸುಖವನ್ನು, ಇತರ ಪಾಠಕರೂ ಅನುಭವಿಸದೆ ಇರಲಾರರು ಎಂದು ನನ್ನ ಭಾವನೆ. ಭರತಖಂಡದಲ್ಲಿ ಪುಣ್ಯ ಕ್ಷೇತ್ರಗಳಿಗೇನೂ ಕಡಿಮೆ ಇಲ್ಲ. ಆದರೆ ಎಲ್ಲರೂ, ಎಲ್ಲಾ ಕ್ಷೇತ್ರಗಳಿಗೂ ಪ್ರವಾಸ ಮಾಡುವುದು ಸಾಧ್ಯವಿಲ್ಲ. ಆದಕಾರಣ ಕ್ಷೇತ್ರಯಾತ್ರೆಗಳನ್ನೂ, ಪ್ರವಾಸಗಳನ್ನೂ ಮಾಡುವ ಸಾಹಿತಿಗಳು ಒಂದು ರೀತಿಯಲ್ಲಿ ತಮ್ಮ ಜನತೆಯ ಮನೋನಯನಗಳಾಗುತ್ತಾರೆ; ಅಂದರೆ, ತಮ್ಮ ಪ್ರವಾಸವನ್ನು ಕುರಿತು ಬರೆದು ಪ್ರಕಟಿಸಿದರೆ. "ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ।" ಎಂಬ ಆರೋಕ್ತಿಯಂತೆ, ಜನರ ಬಾಳಿನಲ್ಲಿ ಅವರ ಪಾತ್ರ ಪ್ರಧಾನವಾದುದು. ನನ್ನ ಮಿತ್ರರಾದ ಶ್ರೀ ಜಿ. ವೆಂಕಟಯ್ಯನವರು ನಮ್ಮ ಜನತೆಯ

ಕಣ್ಣಾಗಲಿ; ಕಂಠವಾಗಲಿ; ಅವರ ಲೇಖನಿ ಅನುಭವದಿಂದ ಚೇತನಗೊಂಡು ಮುಂದುವರಿಯಲಿ ಎಂದು ಹಾರೈಸುತ್ತೇನೆ.

೧೦೬೩/೫೨, ಸಿಮೆಂಟ್‌ಬ್ಲಾಕ್
ಚಾಮುಂಡಿಪುರಂ-ಮೈಸೂರು
೨೪—೪—೧೯೫೨

ಇತಿ,
**ಆನಂದ**

---

## ಎರಡನೆ ಮುದ್ರಣದ ಅರಿಕೆ

'ಚಿನ್ನದಗಿರಿ ಯಾತ್ರೆ' ಪುಸ್ತಕ ಮುಗಿದು ಹೋಗಿ ನಾಲ್ಕು ವರ್ಷಗಳಾಗುತ್ತಾ ಬಂದರೂ ಎರಡನೆಯ ಮುದ್ರಣಕ್ಕೆ ಅವಕಾಶವಾಗಲಿಲ್ಲ. ಇದರ ಪ್ರಕಾಶನದ ಹೊರೆಯನ್ನು ನನ್ನ ಆತ್ಮೀಯ ಮಿತ್ರರಾದ ಶ್ರೀ ಎಸ್. ಕೆ. ಕಾಂತಾವರ್ ಅವರು ಹೊತ್ತಿದ್ದಾರೆ. ಅವರಿಗೆ ನನ್ನ ವಂದನೆ.

ಈ ಪುಸ್ತಕ ೧೯೫೧ ರಲ್ಲಿ ಅಚ್ಚಾಗಿ ಹೊರಬಿದ್ದ ಒಂದು ವರ್ಷದೊಳಗೆ ಪ್ರತಿಗಳು ಮುಗಿದು ಹೋದವು. ಕನ್ನಡ ನಾಡಿನ ಜನರು ಅತಿ ಆದರದಿಂದ ಈ ಪುಸ್ತಕವನ್ನು ಕೊಂಡು, ಓದಿ, ಮೆಚ್ಚಿಗೆ ಕಾಗದಗಳನ್ನು ಬರೆದಿದ್ದಾರೆ. ಅವರೆಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಈ ಕೃತಿಯ ಮುಖ್ಯಪಾತ್ರವಾಗಿದ್ದ ಲಕ್ಷ್ಮಿ ಈಗ ಬದುಕಿಲ್ಲ. ಆಕೆ ನನ್ನ ಜೀವನದಲ್ಲಿದ್ದಂತೆ ನನ್ನ ಪ್ರವಾಸದಲ್ಲಿಯೂ ಸಹಪಾಠಿಯಾಗಿದ್ದು ಈ ಕೃತಿಯ ರಚನೆಗೆ ಬಹುಸ್ಫೂರ್ತಿಯಾಗಿದ್ದಳು. ಆಕೆ ಕ್ಯಾನ್ಸರ್ ರೋಗಕ್ಕೆ ತುತ್ತಾಗಿ ೧೯೫೪ ನೆ ಜನವರಿ ೨೪ ರಲ್ಲಿ ಮೃತ್ಯುವನ್ನಪ್ಪಿದಳು. ಈ ಕೃತಿಯಲ್ಲಿ ಮಾತ್ರ ಲಕ್ಷ್ಮಿಯಾಗಿ ಜೀವಂತವಾಗಿದ್ದಾಳೆಂದು ಕಡುದುಃಖದಿಂದ ಸ್ಮರಿಸಿಕೊಳ್ಳುತ್ತಿದ್ದೇನೆ.

ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಜಿ. ಎಚ್. ರಾಮರಾಯರಿಗೆ ನನ್ನ ವಂದನೆ.

೨೯೦, ನಜರ್‌ಬಾದ್,
ಮೈಸೂರು
೧೦—೧೧—೫೭.

ಇತಿ,
ಜಿ. ವೆಂಕಟಯ್ಯ

# ಚಿನ್ನದಗಿರಿ ಯಾತ್ರೆ

## ೧. ಪ್ರಯಾಣ

ದೇವರು ಸರ್ವಶಕ್ತನೆಂದೂ ಸರ್ವಜ್ಞಾನಿಯೆಂದೂ ಸರ್ವಾಂತರ್ಯಾಮಿಯೆಂದೂ ಪ್ರಾಯಿಕವಾಗಿ ಎಲ್ಲ ಧರ್ಮಗಳೂ ಸಾರುತ್ತವೆ. ಆದರೂ ಆ ಭಾವನೆಗೆ ಬಂದು ಆಕಾರವನ್ನು ಕಲ್ಪಿಸಿ ಆರಾಧಿಸುವುದು ನಮ್ಮ ಜನರ ಪದ್ಧತಿ. ದೇವದೇವನು ನಮ್ಮವರಿಗೆ ಸತ್ಯ ಶಿವ ಸೌಂದರ್ಯದ ಸಾಕಾರ ಮೂರ್ತಿ. ಆದ್ದರಿಂದಲೆ ಪ್ರಕೃತಿಯಲ್ಲಿ ದೈವವನ್ನು ಕಂಡು ಅದನ್ನು ಅವರು ಆರಾಧಿಸಿದರು. ಎಲ್ಲ ಧರ್ಮದ ಜನರೂ ತಮ್ಮ ತಮ್ಮ ಆರಾಧನೆಯ ದೇವರಿಗೆ ಒಂದು ಬೆಟ್ಟದ ನೆತ್ತಿಯಲ್ಲೊ, ಒಂದು ಅರಣ್ಯದ ಮಧ್ಯದಲ್ಲೊ, ಸಂಗಮ ಸ್ಥಳಗಳಲ್ಲೊ ಮಂದಿರಗಳನ್ನು ರಚಿಸುತ್ತಾರೆ. ಇಂತಹ ಸ್ಥಳಗಳು ಪುಣ್ಯ ಕ್ಷೇತ್ರಗಳಾಗಿ ಜನತೆಯನ್ನು ಆಕರ್ಷಿಸುತ್ತವೆ. ಜನರು ಆ ಸ್ಥಳಗಳಿಗೆ ಗುಂಪು ಗುಂಪಾಗಿ ಯಾತ್ರೆ ಹೋಗುತ್ತಾರೆ.

'ಯಾತ್ರೆ' ಎಂಬ ಪದ ಕಿವಿಗೆ ಬಿದ್ದೊಡನೆ ಒಂದು ಬಗೆಯ ಭಕ್ತಿ ಭಾವ ಸಾಮಾನ್ಯವಾಗಿ ನಮ್ಮ ನಾಡಿಯಲ್ಲಿ ಮಿಡಿಯುತ್ತದೆ. ಯಾತ್ರಾ ಸ್ಥಳಕ್ಕೆ ಹೋಗುವವರನ್ನು ಆದರ ವಿಶ್ವಾಸಗಳಿಂದ ಅರೆ ನಿಮಿಷ ನೋಡ ಬಯಸುತ್ತೇವೆ. ಕೆಲವರು ತಮ್ಮದೂ ಒಂದು ಕಾಸಿನ ಧೂಪ ದೇವರಿಗೆ ಸಲ್ಲಲಿ ಎಂದು, ಯಾತ್ರೆ ಹೋಗುವವರ ಮೂಲಕ ಅವರವರ ಯೋಗ್ಯತಾನುಸಾರ ಕಾಣಿಕೆ ಕಳುಹಿಸುತ್ತಾರೆ. ಯಾತ್ರಿಕರಲ್ಲಿ ಕೆಲವರು ಅರಿಶಿನದ ಉಡುಪನ್ನುಟ್ಟು, ತಮ್ಮ ಊರಿನಲ್ಲೋ ಕೇರಿಯಲ್ಲೋ ಹೊರಡುವ ದಿನ ಭಿಕ್ಷಾಟನೆ ಮಾಡಿ, ಶ್ರದ್ಧಾಭಕ್ತಿಯಿಂದ ಕಾಲುನಡಗೆಯಲ್ಲೆ ಪ್ರಯಾಣ ಬೆಳಸುತ್ತಾರೆ. ಇದು ಒಂದು ಬಗೆಯ ನಿಷ್ಠೆ. ನಮ್ಮ ಹಿಂದಿನ ತಲೆಮಾರಿನವರೆಲ್ಲಾ ಅನೇಕ ಯಾತ್ರಾಸ್ಥಳಗಳಿಗೂ ತೀರ್ಥಗಳಿಗೂ ಸಂಸಾರ ಸಮೇತ ತಿಂಗಳುಗಟ್ಟಲೆ ಕಾಲುನಡಗೆಯಲ್ಲೆ ಹೋಗುತ್ತಿದ್ದರು. ಉದ್ದೇಶವಾದರೂ ಇಷ್ಟೇ ಇರಬೇಕು: ದಾರಿಯಲ್ಲಿ ಸಂಧಿಸುವ ದೇವಾಲಯಗಳಲ್ಲಿ ಪೂಜೆ ಮಾಡಿಸುವುದು, ದೇಶವನ್ನು ಕಣ್ಣು ತುಂಬ ನೋಡುವುದು ಮತ್ತು ಸಂಸಾ

ರದ ಗಜಿಬಿಜಿಯ ಹೊಡೆತದಿಂದ ಸ್ವಲ್ಪಕಾಲವಾದರೂ ದೂರವಿದ್ದು ಶಾಂತಿ ಪಡೆಯುವುದು. ಉದ್ದೇಶದ ಅರಿವಿಲ್ಲದಿದ್ದರೂ ಪೂರ್ಣ ಫಲವನ್ನು ಮಾತ್ರ ಚಾಚೂ ತಪ್ಪದೆ ಸವಿಯುತ್ತಾರೆ. ನಮ್ಮ ಜನ ದೇವರ ಸೇವೆಗೋಸ್ಕರ ಎಂಥ ಕಷ್ಟವನ್ನಾದರೂ ಸಹಿಸಬಲ್ಲರು. ಹಣ್ಣು ಹಣ್ಣು ಮುದುಕಿಯರುಕೂಡ ಮಾಘ ಮಾಸದಲ್ಲಿ ಕೋಳಿ ಕೂಗುವುದಕ್ಕೆ ಮೊದಲೇ ಕೊರೆಯುವ ಚಳಿಯಲ್ಲಿ ಎದ್ದು ನದಿಯಲ್ಲೊ ಕೆರೆಯಲ್ಲೊ ಮಿಂದು, ದೇಹವು ಗಡಗಡನೆ ನಡುಗಿದರೂ ಚೇತನವು ಪಾವನವಾಯಿತೆಂಬ ಸಂತೋಷದಲ್ಲಿ ಆ ಕಷ್ಟವನ್ನೂ ಸಹಿಸುವರು. ಪವಿತ್ರ ಯಾತ್ರಾಸ್ಥಳಗಳಿರುವುದು ನಿರ್ಜನವಾದ ನಿಸರ್ಗದ ಮಡಿಲಲ್ಲಿ ತಾನೆ? ಜನರು ಅಲ್ಲಿನ ಪ್ರಶಾಂತ ವಾತಾವರಣದಲ್ಲಿ ನೆಲಸಿರುವ ದೇವ ಮೂರ್ತಿಯ ಅಡಿದಾವರೆಗಳಲ್ಲಿ ತಮ್ಮ ಕಷ್ಟವನ್ನು ತೋಡಿಕೊಂಡು ಮನ ಸ್ಸನ್ನು ಹಗುರ ಮಾಡಿಕೊಳ್ಳುತ್ತಾರೆ. ಸತತವೂ ಯಾತ್ರಿಕರು ಕಿಕ್ಕಿರಿದು ಹೋಗುತ್ತಾ ಬರುತ್ತಾರಾದ್ದರಿಂದ, ವ್ಯಾಪಾರಿಗಳು ಅವರ ಸೌಕರ್ಯಕ್ಕೂ, ಅದಕ್ಕೂ ಮಿಗಿಲಾಗಿ ತಮ್ಮ ಹೊಟ್ಟೆಯ ಪಾಡಿಗೂ ಭೋಜನ ಶಾಲೆ, ಅಂಗಡಿ ಮುಂಗಟ್ಟುಗಳನ್ನು ಇಟ್ಟುಕೊಳ್ಳಲು ಪ್ರಾರಂಭಮಾಡಿ ಈಗ ಕೆಲವು ಕ್ಷೇತ್ರ ಗಳು ದೊಡ್ಡ ದೊಡ್ಡ ಪಟ್ಟಣಗಳೇ ಆಗಿವೆ. ಅಂತಹವುಗಳಲ್ಲಿ ದಕ್ಷಿಣ ದೇಶದ ತಿರುಪತಿಯು ಭೂಲೋಕದ ವೈಕುಂಠವೆಂದು ಪ್ರಸಿದ್ಧಿಯಾಗಿದೆ. ದಕ್ಷಿಣ ದೇಶದ ಹಿಂದುಗಳನ್ನು ಉತ್ತರ ದೇಶದ ಯಾತ್ರಾಸ್ಥಳಗಳಾದ ಕಾಶಿ, ಬದರಿ ನಾಥ, ಅಮರನಾಥ, ಕೈಲಾಸಕ್ಕೆ ಎಳೆಯುವ ಆ ಒಂದು ತಂತೇ ಉತ್ತರ ದೇಶದ ಹಿಂದುಗಳನ್ನು ದಕ್ಷಿಣ ದೇಶದ ಯಾತ್ರಾಸ್ಥಳಗಳಾದ ತಿರುಪತಿ, ಕಂಚಿ, ಮಧುರೆ, ರಾಮೇಶ್ವರಕ್ಕೆ ಎಳೆಯುತ್ತದೆ. ಯಾವ ಜಾಲ ಹಿಮಾ ಚಲದಿಂದ ಕನ್ಯಾಕುಮಾರಿಯವರೆಗಿನ ಹಿಂದುಗಳನ್ನು ವೆಂಕಟಾಚಲಕ್ಕೆ ಯಾತ್ರೆ ಬರುವಂತೆ ಆಕರ್ಷಿಸುತ್ತದೆಯೋ, ಪ್ರೇರೇಪಿಸುತ್ತದೆಯೋ ಅದೇ ಜಾಲವೆ ದೇವಾಂಶವೆಂಬುದು. ತಿರುಪತಿಯು ಹಿಂದಿನ ಕಾಲದಲ್ಲಿ ನಿರ್ಜನ ನಿಬಿಡಾರಣ್ಯ. ಈಗಲೂ ಅರಣ್ಯವೇ. ಕಾಲ ಗತಿಸಿದಂತೆಲ್ಲಾ ಯಾತ್ರಿ ಕರು ಸಾವಿರಗಟ್ಟಲೆ ನಿತ್ಯವೂ ಹೋಗಿಬರುತ್ತಿರುವುದರಿಂದ ಅದು ಒಂದು ಪುಟ್ಟ ಪಟ್ಟಣವೇ ಆಗಿದೆ.

ಒಂದು ದಿನ ನನ್ನ ಹೆಂಡತಿ ಇದ್ದಕ್ಕಿದ್ದ ಹಾಗೆ, "ನೋಡಿ, ಆ ಬಾವಿ ಮನೆ ನಂಜಮ್ಮನೋರು ಸಂಸಾರ ಸಮೇತ ಹೊರಟಿದ್ದಾರೆ—" ಎಂದಳು.

ನಾನು ಕಕ್ಕಾಬಿಕ್ಕಿಯಾಗಿ ಒಂದೇ ಉಸಿರಿನಲ್ಲಿ ಕೇಳಿದೆ:

" ಎಲ್ಲಿಗೆ ಹೊರಟಿದ್ದಾರೆ ?"—ಎಂದು,

" ಇನ್ನೆಲ್ಲಿಗೆ ?—ತಿರುಪತಿ ಯಾತ್ರೆಗೆ"

" ಅದಕ್ಕೆ ನಾನೇನು ಮಾಡಬೇಕು ?"

" ತಿರುಪತಿ ವೆಂಕಟರಮಣಸ್ವಾಮಿ ನಮ್ಮ ಮನೆ ದೇವರು. ಈಗ್ಗೆ ಐದಾರು ವರ್ಷದಲ್ಲಿ ಅಲ್ಲಿಗೆ ಹೋಗಿದ್ದಾಗ 'ಚಿನ್ನದ ನಾಲಗೆ ಮಾಡಿಸಿ ಕಣಜಕ್ಕೆ ಹಾಕುತ್ತೇನೆ' ಅಂತ ಹರಕೆ ಮಾಡಿಕೊಂಡಿದ್ದಿರಿ."

" ಹೌದು; ಮರತೇ ಹೋಗಿತ್ತಲ್ಲ !"

" ಎಲ್ಲಾದರೂ ಉಂಟೆ ! ಮರೆಯುವುದೆಂದರೆ ಏನು ಹುಡುಗಾಟವೆ ? ತಿರುಪತಿ ತಿಮ್ಮಪ್ಪ ಬಡ್ಡಿಗೆ ಬಡ್ಡಿ ವಸೂಲು ಮಾಡ್ತಾನೆ!"

ನನಗೆ ಮರವು ಮಾಯವಾಗಿ ಜ್ಞಾಪಕ ಮಿಂಚಿನ ವೇಗದಲ್ಲಿ ಹೊಳೆಯಿತು.

" ಸರಿ ಸರಿ, ರಂಗಸ್ವಾಮಿಗೆ ತಲೆ ಮುಡಿ ಕೊಡುವುದಕ್ಕೆ ಹೋಗಿದ್ದೆವಲ್ಲ ಆಗ ಮಾಡಿಕೊಂಡಿದ್ದ ಹರಕೆ ಅಲ್ಲವೆ ?" ಎಂದೆ.

ಪಕ್ಕದಲ್ಲಿ ರಂಗಸ್ವಾಮಿ, ಕೋಟೆ ಆಂಜನೇಯನ ದೇವಸ್ಥಾನದಲ್ಲಿ ನೋಡಿದ್ದ ಆಂಜನೇಯ ವಿಗ್ರಹದ ಚಿತ್ರವನ್ನು ಒಂದು ಕಾಗದದ ಮೇಲೆ ವಕ್ರವಕ್ರವಾಗಿ ಬರೆಯುತ್ತಾ ಕೆಡಿಸುತ್ತಾ ಇದ್ದ. ಒಂಬತ್ತು ವರ್ಷದ ಹುಡುಗ. ಮನಸ್ಸು ಚಿತ್ರದ ಕಡೆ, ಕಿವಿ ನಮ್ಮ ಮಾತಿನ ಕಡೆ ಇತ್ತು, ಅಂತ ಕಾಣುತ್ತೆ.

" ಏನಪ್ಪ ಅದು ? ನನಗೆ ತಲೆ ಮುಡಿ ಕೊಡುವುದಕ್ಕೆ ಹೋಗಿದ್ದಾಗ ಅಂದಲ್ಲ" ಎಂದ.

ಸಣ್ಣ ಹುಡುಗರೇನು ಸಾಮಾನ್ಯರೆ ? ತಿಳಿವಳಿಕೆ ಇಲ್ಲದ ಸೊಸೆಯಂದಿರು ಇಂಥ ಸಣ್ಣ ಹುಡುಗರ ಹಾಜರಿಯನ್ನು ಲೆಕ್ಕಿಸದೆ ತಮ್ಮ ಅತ್ತೆಯರ ಮೇಲೆ 'ಅವಳು ಹಾಗೆ ಇವಳು ಹೀಗೆ' ಅಂತ ಹೀಯಾಳಿಸುತ್ತಿದ್ದರೆ ಅವರ ಗತಿ ಮುಗಿಯಿತು ! ನಮ್ಮ ಸಂಸಾರದಲ್ಲಿ ಆ ಭಯಕ್ಕೆ ಕಾರಣವಿಲ್ಲ, ಈಗ.

" ನೀನು ಎರಡು ವರ್ಷದ ಮಗುವಾಗಿದ್ದಾಗ ತಿರುಪತಿಗೆ ಎತ್ತಿಕೊಂಡು ಹೋಗಿ ನಿನ್ನ ತಲೆಕೂದಲನ್ನು ದೇವರಿಗೆ ಮುಡಿ ಅರ್ಪಿಸಿದೆ ಅಷ್ಟೆ."

" ಈಗ ನಡಿಯಪ್ಪ, ಹೋಗುವ"

" ಸುಮ್ಮನೆ ಹೊರಟರೆ ಆದೀತೇನೊ ?

ಅವನ ತಾಯಿ ಮಧ್ಯೆ ಬಾಯಿ ಹಾಕಿ,

" ಹಾಗಂತಲೆ ಇದ್ದೀರಲ್ಲ. ' ದೇವರೇ ನೀನೆ ಗತಿ ' ಅಂತ ಒಂದೇ ಮನಸ್ಸಿನಿಂದ ಹೊರಡುವುದು ಮೇಲು " ಎಂದಳು.

ಆ ಮಾತಿನ ಮೇಲೆ ನಾನು ಸ್ವಲ್ಪ ಮೆಲುಕು ಹಾಕಿದೆ. ನನಗೂ ಅದೇ ಸರಿ ಎನ್ನಿಸಿತು.

" ಅದು ಸರಿ, ಹೋಗುವಾಗ ನಾಲ್ಕೈದು ಜನಕ್ಕಾದರೂ ಅನ್ನ ಹಾಕ ಬಾರದೆ ?" ಎಂದೆ.

ಸರಿ, ನನ್ನ ರಾಣಿಯ ಕಿವಿಗಳು ನೆಟ್ಟಗಾದುವು.

" ಅದಕ್ಕೇನಂತೆ, ನಾಳೆಯೇ ಸಾಮಾನೆಲ್ಲಾ ಜೋಡಿಸಿಕೊಂಡ ರಾಯಿತು. ಒಂದಷ್ಟು ಬಾಳೆ ಎಲೆ, ತೆಂಗಿನಕಾಯಿ ತರುವಂತೆ ನಮ್ಮೂರಿಗೂ ಕಾಗದ ಬರೆದುಬಿಡುತ್ತೇನೆ. ಶುಕ್ರವಾರ ಊಟಕ್ಕೆ ಏರ್ಪಾಡು ಮಾಡಿ, ಶನಿವಾರ ಹೊರಡುವುದು ಮೇಲು" ಎಂದಳು.

ದೇವರ ಸೇವೆ ಮಾಡುವವರಿಗೇಕೆ ಅಡ್ಡಿ ಬರಲಿ ಎನ್ನಿಸಿತು ನನಗೆ.

" ಹಾಗಾದರೆ ಏನೇನು ಬೇಕೊ ಅದೆಲ್ಲಾ ಜೊತೆ ಮಾಡಿಕೊ. ಶುಕ್ರ ವಾರ ದೇವರ ಪೂಜೆ ಮಾಡಿಸಿ ಶನಿವಾರ ಹೊರಟೇ ಬಿಡೋಣ" ಎಂದೆ.

ಹರಕೆ (ಚಿನ್ನದ ನಾಲಗೆ) ಅಕ್ಕಸಾಲಿಯಿಂದ ಮಾಡಿಸುವುದು, ಮೈಸೂರು ಪಟ್ಟಣದ ಆ ಮೂಲೆ ಈ ಮೂಲೆಯಲ್ಲಿದ್ದ ಸ್ನೇಹಿತರನ್ನು ಹುಡುಕಿ ಹಿಡಿದು ಶುಕ್ರವಾರ ಸಾಯಂಕಾಲ ಊಟಕ್ಕೆ ಬರಬೇಕೆಂದು ಆಹ್ವಾನಿಸುವುದು—ಈ ಕೆಲಸಗಳಲ್ಲಿ ನನಗೆ ಉಳಿದಿದ್ದ ನಾಲ್ಕು ದಿನಗಳೂ ನಾಲ್ಕು ಗಂಟೆಗಳಂತೆ ಕಳೆದವು. ರಂಗಸ್ವಾಮಿ ದಿನವೂ ಕೇಳುತ್ತಲೇ ಇದ್ದ:

" ಯಾವಾಗಪ್ಪ ತಿರುಪತಿಗೆ ಹೋಗೋದು, ಯಾವಾಗಪ್ಪ ?" ಅಂತ.

" ನಾಳೆ ಶನಿವಾರ, ನಾಳೆ ಶನಿವಾರ "—ಅಂತ ಹೇಳಿ ಹೇಳಿ ನನಗೂ ಸಾಕಾಗಿ ಹೋಗುತ್ತಿತ್ತು. ಈ ಮಧ್ಯೆ ತಿರುಪತಿಯಿಂದ ಮದ್ರಾಸಿಗೂ ಹೋಗಿ ಬರುವುದೆಂದು ತೀರ್ಮಾನಿಸಿದೆವು. ಹೆಂಗಸರನ್ನು ಕರೆದುಕೊಂಡು ಪ್ರಯಾಣ ಹೊರಡಬೇಕಾದರೆ ಹೆಚ್ಚಿಗೆ ತೊಂದರೆ ತಾಪತ್ರಯ ಅನುಭವಿಸು ವುದಕ್ಕೆ ಸಿದ್ಧವಾಗಿರಬೇಕು. ಆ ಕಷ್ಟ ಅನುಭವಿಸಿದವರಿಗೇ ಗೊತ್ತು ! ಅವರ ಅನುಭವ ಕೇಳಿದರೆ ಸಂಸಾರ ಕಟ್ಟಿಕೊಳ್ಳುವುದಕ್ಕೆ ಹಾತೊರೆಯುವ ಬ್ರಹ್ಮಚಾರಿಯೂಕೂಡ ಬ್ರಹ್ಮಚರ್ಯವನ್ನೇ ಬಿಗಿಯಾಗಿ ತಬ್ಬಿಬಿಟ್ಟಾನು !

ಶುಕ್ರವಾರ ಮೆಲ್ಲನೆ ಸುಳಿಯಿತು. ನನ್ನ ಹೆಂಡತಿ—ಹೆಸರನ್ನೇ ಹೇಳಿಬಿಡುತ್ತೇನೆ—ಲಕ್ಷ್ಮಿ ತೌರೂರಿಗೆ ಕಾಗದ ಬರೆದಿದ್ದಳು. ಅದೇ ಪ್ರಕಾರ ಆಕೆಯ ತಂದೆತಾಯಿಗಳು ಮಧ್ಯಾಹ್ನದ ರೈಲಿನಲ್ಲಿ ಬಂದರು. ಅವರು ಬರಿ ಕೈಯಲ್ಲಿ ಬರಲಿಲ್ಲ. ಸಾಧ್ಯವಾದಷ್ಟೂ ಹೊತ್ತು ತಂದಿದ್ದರು ; ಪಟ್ಟಣದವರ ರೇಷನ್ ಬವಣೆ ಅವರಿಗೆ ಚೆನ್ನಾಗಿ ಗೊತ್ತಿತ್ತು. ಅವರು ಚನ್ನಪಟ್ಟಣದ ತಾಲ್ಲೂಕಿನ ಮೈಲನಾಯಕನ ಹಳ್ಳಿಯವರು ; ವ್ಯವಸಾಯಗಾರರು. ನಮ್ಮ ಹಳ್ಳಿ ಕಡೆ 'ಆರು ಪಡಿ ಬೆಳೆದರೂ ಆರಂಭದ ಸಮವಿಲ್ಲ' ಅನ್ನುವ ಗಾದೆಯುಂಟು. ಬೆಳೆ ತೆಗೆಯುವ ರೈತರನ್ನು ಕಂಡರೆ ಒಂದು ತರದ ಸಂತೋಷವುಂಟಾಗುತ್ತದೆ. ಮನುಷ್ಯನಿಗೆ ಯಾವ ವಸ್ತು ಸುಲಭವಾಗಿ ಲಭಿಸುವುದಿಲ್ಲವೊ ಅದರ ಮೇಲೆ ಕಾತರತೆ ಹೆಚ್ಚು. ಈಗನ ಪರಿಸ್ಥಿತಿಯಲ್ಲಿ ಆಹಾರ ಸಾಮಗ್ರಿಗಳಿಗಿರುವ ಬೆಲೆ ದುಡ್ಡಿಗೂ ಇಲ್ಲ, ಅಂತ ಕಾಣುತ್ತೆ. ದುಡ್ಡು ಗುಡ್ಡೆ ಹಾಕಿಕೊಂಡು ನೋಡುತ್ತಾ ಕುಳಿತರೆ ಹೊಟ್ಟೆ ಕೇಳುತ್ತದೆಯೆ ? ಗುಟುಕಿದ್ದರಲ್ಲವೆ ಮಿಟಕು !

ಶುಕ್ರವಾರದ ಸಾಯಂಕಾಲದ ಹೊತ್ತಿಗೆ ಚೊಕ್ಕ ಭೋಜನ ಸಿದ್ಧವಾಯಿತು. ನಮ್ಮೂರಿನ ಹುಡುಗ ವಿಷಕಂಠನಿಗೆ ಒಬ್ಬ ದಾಸಯ್ಯನನ್ನು ಕರೆತರುವ ಸರದಿ ಬಿತ್ತು. ಏಳು ಘಂಟೆಗೆ ಸರಿಯಾಗಿ ನನ್ನ ಹಿರಿಯ ಮಿತ್ರರಾದ ಲಿಂಗಪ್ಪನವರೂ ರಂಗಸ್ವಾಮಿಯವರೂ ಬಂದರು. ನಾನು, "ನಮಸ್ಕಾರ. ಈ ಕೊಠಡಿಗೆ ದಯಮಾಡಿ" ಎಂದೆ. ಲಿಂಗಪ್ಪನವರು ತೀಕ್ಷ್ಣಮನೋದೃಷ್ಟಿಯ ವ್ಯಕ್ತಿಗಳು, ಬರಬರುತ್ತಲೆ ಹೇಳಿದರು :

"ಏನಪ್ಪ, ನೀನೇ ಧೀರ. ಇಂಥ ಕಷ್ಟಕಾಲದಲ್ಲಿ ಹೊರಟುಬಿಟ್ಟಿದ್ದೀಯಲ್ಲ, ಪೂರ್ವ ದೇಶಕ್ಕೆ !" ಎಂದು.

"ಒಳ್ಳೆ ಕೆಲಸಕ್ಕೆ ಇಂಥ ಕಾಲ ಅಂಥ ಕಾಲ—ಒಂದೂ ಇಲ್ಲ. ಯಾವಾಗ ಮನಸ್ಸು ಬಂತೊ ಆಗ ಮಾಡಬೇಕು"—ಎಂದೆ.

"ಹಾಗಾದರೆ ತಿರುಪತಿಯಿಂದ ನನಗೇನಪ್ಪ ತಂದು ಕೊಡುತ್ತಿ ?" ಎಂದು ಅವರು ಕೇಳಿದರು.

ಸ್ನೇಹಿತ ರಂಗಸ್ವಾಮಿಯವರು ಮೃದು ಮನಸ್ಸಿನ ಮೌನ ವ್ಯಕ್ತಿಗಳು. ಮೆಲ್ಲನೆ ಬಾಯಿ ತೆಗೆದು, "ಹಾಗೆ ಕೇಳಿಕೊಳ್ಳಿ ಬುದ್ಧಿ, ನಿಮಗೆ ಏನೇನು ಆಸೆ ಇದೆಯೋ ಅದನ್ನೆಲ್ಲಾ" ಎಂದರು.

"ತಿರುಪತಿಯಿಂದ ಬೇಕಾದಷ್ಟು ತಂದುಕೊಡುತ್ತೇನೆ. ಹೆದರಬೇಡಿ"

ಎಂದೆ ನಾನು.

" ಅದೇನಪ್ಪ ಬೇಕಾದಷ್ಟು " ಎಂದು ಕುತೂಹಲದಿಂದ ಲಿಂಗಪ್ಪನವರು ಕೇಳಿದರು. ರಂಗಸ್ವಾಮಿಯವರೆ ಅವರಿಗೆ ಉತ್ತರ ಕೊಟ್ಟರು.

" ಗೊತ್ತಿಲ್ಲವೆ ಸ್ವಾಮಿ, ಹಣೆಯ ಮೇಲೆ ಹಾಕಿಕೊಳ್ಳುವುದು ! " ಎಂದು. ನಾವು ಮೂವರೂ ಘೊಳ್ಳೆಂದು ನಕ್ಕೆವು. ಅಷ್ಟರಲ್ಲಿ ಇನ್ನೊಬ್ಬ ಮಿತ್ರರಾದ ಬಸವಯ್ಯನವರೂ ಬಂದರು. ಸಿದ್ದಪ್ಪನವರೇನೋ ನನ್ನ ಮನೆ ಪಕ್ಕದವರು. ಅವರೂ ಬಂದು ಕುಳಿತರು. ಮತ್ತೊಬ್ಬ ಮಿತ್ರರಾದ ಮಲ್ಲಪ್ಪನವರೂ ಬಂದರು. ಪೂಜಾರಿಯೂ ಬಂದ. ರಂಗಸ್ವಾಮಿಯವರು " ಹಾಗೆಯೇ ತಿರುಪತಿ ತಿಮ್ಮಪ್ಪನಲ್ಲಿ ಇನ್ನೊಂದು ಬಯಕೆ ಕೇಳಿಕೊಳ್ಳಿ, ಬುದ್ಧಿ ! " ಎಂದರು ಲಿಂಗಪ್ಪನವರಿಗೆ.

ಲಿಂಗಪ್ಪನವರು, " ಅದೇನು ಮಹಾ ಹೆಚ್ಚು, ರಂಗಣ್ಣ ? ತಿರುಪತಿ ತಿಮ್ಮಪ್ಪ ಕಿರುಗಣ್ಣು ಬಿಟ್ಟರೆ ಸಾಕು—ಎಲ್ಲಾ ಸಿದ್ಧಿಯಾಗುತ್ತೆ " ಎಂದರು. ಬಸವಯ್ಯನವರು ಲಘುವಾಗಿ ಹೇಳಿದರು :

" ಹೇಗೂ ನೌಕರಿಗೆ ರಾಜೀನಾಮೆ ಕೊಟ್ಟಿದ್ದೀರಿ. ಮುಂದೆ ಮಂತ್ರಿ ಪದವಿ ಸಿಕ್ಕಲಿ, ಅಂತ ಬೇಡಿಕೊಳ್ಳಿ "—

ನಾವೆಲ್ಲಾ " ಅದು ಸರಿ " ಎಂದು ಬಸವಯ್ಯನವರ ಮಾತಿಗೆ ತಾಳ ಹಾಕಿದೆವು.

" ಮಂತ್ರಿ ಪದವೀನೇ ಬೇಕೆ, ಸೇವೆ ಮಾಡೋದಕ್ಕೆ ? ಮನುಷ್ಯನ ಮನಸ್ಸು ಶುದ್ಧವಾದ ಹೊರತು ಮಂತ್ರಿ ಪದವಿ ಬಂದರೂ ಜನಸೇವೆ ಮಾಡಲು ಅಸಾಧ್ಯ " ಎಂದರು ಲಿಂಗಪ್ಪನವರು. ಅಷ್ಟರಲ್ಲಿ ಪೂಜಾರಿ ಮಂಗಳಾರತಿ ತಂದ. ಮಂಗಳಾರತಿ ಸ್ವೀಕರಿಸಿ, ಎಲ್ಲರೂ ಎಲೆಯ ಮುಂದೆ ಕುಳಿತೆವು. ಬಡಿಸುವವರ ಜೊತೆಗೆ ನನ್ನ ತಮ್ಮಗೋಪಾಲನೂ ಸೇರಿಕೊಂಡ.

ಸರಿ, ಪ್ರಾರಂಭವಾಯಿತು ಮಾತಿಗೆ.

" ಏನು ಸ್ವಾಮಿ ತಿರುಪತಿಗೆ ಐವತ್ತು ರೂಪಾಯಿ ಕಾಣಿಕೆ ಕಳುಹಿಸಿ. ಹೇಗೂ ಮುಂದೆ ತಾವು ದೊಡ್ಡ ಪದವಿಗೆ........" ಎಂದು ರಂಗಸ್ವಾಮಿಯವರು ಪ್ರಾರಂಭ ಮಾಡಿದರು ಲಿಂಗಪ್ಪನವರೊಡನೆ.

" ನಾನು ಎರಡು ರೂಪಾಯಿ ಕಳುಹಿಸುತ್ತೇನೆ, ರಂಗಣ್ಣ. ಒಂದು ಆರತಿಗೆ, ಒಂದು ಕಣಜಕ್ಕೆ. ಈಗಲೇ ತಕ್ಕೊಳ್ಳಪ್ಪ"

ಎಂದು, ನನ್ನ ಜೇಬಿಗೆ ಎರಡು ರೂಪಾಯಿ ತುರುಕಿದರು. ಊಟ

ಮಾಡುತ್ತಿದ್ದಾಗಲೇ ಸ್ನೇಹಿತರುಗಳಿಂದ ನನ್ನ ಜೇಬಿಗೆ ಐದಾರು ರೂಪಾಯಿಗಳು ಬಿದ್ದವು. ರಂಗಸ್ವಾಮಿಯವರು,

" ಸ್ವಾಮಿಾ, ಮಾತಿನ ಭರದಲ್ಲಿ ಪಾಯಸ ಕಡಿಮೆ ತೆಗೆದುಕೊಂಡೀರಿ; ಸ್ವಲ್ಪ ನೋಡಿ" ಎಂದರು.

" ಈಗೇನು ಊಟ? ಯಾತ್ರೆಯಿಂದ ಬಂದಮೇಲೆ ತಾನೆ ಭರ್ಜರಿ ಊಟ!" ಎಂದರು ಲಿಂಗಪ್ಪನವರು.

ರಂಗಸ್ವಾಮಿಯವರು ಕೇಳಿದರು :

" ಹಾಗಾದರೆ ಆಗಲೂ ಗಂಟು ಬೀಳುತ್ತೀರಿ ಅನ್ನಿ?"

ಲಿಂಗಪ್ಪನವರು ನನ್ನ ಕಡೆ ತಿರುಗಿ,

" ನೀನೆ ಹೇಳಪ್ಪ" ಎಂದರು.

" ಅದೇನು ಮಹಾ ಹೆಚ್ಚು. ಬಂದಮೇಲೆ ಇನ್ನೂ ಒಂದು ಕೈ ಮೇಲಾಗಿ ಆಗಲಿ" ಎಂದೆ.

ಎಲ್ಲರಿಗೂ ಊಟವಾಗಿ ತಾಂಬೂಲವೂ ಆಯಿತು. ಮಿತ್ರರೆಲ್ಲರೂ ನನ್ನನ್ನು ಎಚ್ಚರಿಸಿದರು—

"ಜೋಕೆ. ಭಯ ಭಕ್ತಿಯಿಂದ ಹೋಗಬೇಕು. ಎಂಜಲು ಮೈಲಿಗೆಯಾದೀತು. ಈಗ ಹೊರಡುತ್ತೇವೆ. ನಾಳೆ ನಾವೂ ರೈಲ್ವೆ ಸ್ಟೇಶನ್ನಿಗೆ ಬರುತ್ತೇವೆ"

" ನಮಸ್ಕಾರ, ಹೊರಡಿ" ಎಂದು ಸ್ನೇಹಿತರನ್ನೆಲ್ಲಾ ಬೀದಿಯವರೆಗೂ ಬೀಳ್ಕೊಟ್ಟೆ.

೧೯೫೧ನೇ ಇಸವಿ, ಆಶ್ವಯುಜ ಮಾಸದ ಮೊದಲನೆಯ ದಿನ ಶನಿವಾರ. ಮುಂಜಾನೆಯಿಂದಲೇ ಪ್ರಾರಂಭವಾಯಿತು, ನಮ್ಮ ಪ್ರಯಾಣಕ್ಕೆ ಸಿದ್ಧತೆ. ಮೈಸೂರಿನ ಆಶ್ವಯುಜಮಾಸ ಅಂದು ವೈಶಾಖಮಾಸದಂತಿತ್ತು. ಸೂರ್ಯನು ಎಂದಿಗಿಂತ ಮಿಗಿಲಾಗಿ ಅಂದು ರೇಗುತ್ತ ಗಗನಕ್ಕೇರುತ್ತಿದ್ದ. ಮೂವರಿಗೂ ಬೇಕಾದ ಬಟ್ಟೆಬರೆಗಳನ್ನು ಕಟ್ಟಿಕೊಂಡೆವು. ಮಧ್ಯಾಹ್ನ ಮೂರೂವರೆ ತಾಸಿನ ರೈಲಿಗೆ ಆ ಉರಿ ಬಿಸಿಲಿನಲ್ಲೇ ಹೊರಟೆವು. ಅಕ್ಕಪಕ್ಕದ ಮನೆಯ ರಂಗಮ್ಮ, ನಂಜಮ್ಮ, ಸುಂದರಮ್ಮ ಎಲ್ಲರೂ ಬಂದು,

" ಲಕ್ಷ್ಮಮ್ಮನವರೆ, ನೀವೇ ಪುಣ್ಯವಂತರು. ಯಾತ್ರೆ ಮಾಡಿಕೊಂಡು ಸುಖವಾಗಿ ಬನ್ನಿ. ನಮಗೆಲ್ಲಿ ಬರಬೇಕು ಆ ಭಾಗ್ಯ! ತಕ್ಕೊಳ್ಳಿ ಈ ಪಾವಲಿ, ಕಣಜಕ್ಕೆ ಹಾಕಿ; ಈ ಮುಡುಪು ಕಣಜಕ್ಕೆ ಹಾಕಿ" ಎಂದು ಆಕೆಯ

ಕೈಗಿತ್ತು ತುಸು ದೂರ ಬಂದು ಸಾಗಕಳುಹಿಸಿದ ಮೇಲೆ “ ಹೋಗಿ ಬನ್ನಿ” ಎಂದು ಹೇಳಿ ಹಿಂದಿರುಗಿದರು. ಗೋಪಾಲನು ಗುಂಟುಮೂಟೆ ತೆಗೆದು ಕೊಂಡು ನೇರವಾಗಿ ರೈಲ್ವೆ ನಿಲ್ದಾಣಕ್ಕೆ ಹೊರಟ.

ಅಷ್ಟರಲ್ಲಿ ನನ್ನ ಹಿರಿಯ ಸ್ನೇಹಿತರು ಬಂದು ಸೇರಿದರು. ಅರಮನೆ ಬಾಗಿಲಲ್ಲಿರುವ ಆಂಜನೇಯ ಸ್ವಾಮಿ ದೇವಸ್ಥಾನದಲ್ಲಿ ಪೂಜೆ ಮಾಡಿಸಿ ಹೊರಡಬೇಕೆಂದು ನನಗೆ ಒತ್ತಿ ಒತ್ತಿ ಹೇಳಿದರು. ಸರಿ, ಎಲ್ಲರೂ ಹೋಗಿ ಪೂಜೆ ಮಾಡಿಸಿ, ತೀರ್ಥವನ್ನು ಭಕ್ತಿಯಿಂದ ತೆಗೆದುಕೊಂಡೆವು. ನಾವು ತೆಗೆದು ಕೊಂಡು ಹೋಗಬೇಕಾಗಿದ್ದ ಹರಕೆ(ಚಿನ್ನದ ನಾಲಗೆ) ಅಕ್ಕಸಾಲೆ ಮಹರಾಯ ನಿಂದ ಇನ್ನೂ ನನ್ನ ಜೇಬಿಗೆ ಬಿದ್ದಿರಲಿಲ್ಲ. ನನ್ನ ಕುತೂಹಲವೆಲ್ಲವೂ ಅದರ ಕಡೆಯೆ ಇತ್ತು. ಚಿನ್ನದ ನಾಲಗೆ ಎಂದರೆ ನಾಲಗೆ ರೂಪಿನಂತೆ ಕಂಡೆ, ಕಾಣೆ ಅನ್ನುವಂತಹದು. ಹಾಗಲ್ಲದಿದ್ದರೆ ನಾಲಗೆ ಗಾತ್ರ, ಉದ್ದದ, ಚಿನ್ನದ ನಾಲಗೆ ಯನ್ನು ತಿರುಪತಿ ತಿಮ್ಮಪ್ಪನಿಗೆ ನನ್ನಂತಹ ಬಡಪಾಯಿ ಕೊಡಬಲ್ಲನೆ? ಅಂತು ನಮ್ಮ ಭಾಗಕ್ಕೆ ಬಹು ಮುಖ್ಯವಾದದ್ದು, ಅದು. ಅದನ್ನು ತೆಗೆದುಕೊಂಡು ಬರಲು ನನ್ನ ಮಿತ್ರರಾದ ಸಿದ್ದಪ್ಪನವರು ಅಂಗಡಿ ಕಡೆ ಹೊರಟರು. ನಾವೆಲ್ಲಾ ರೈಲ್ವೆ ನಿಲ್ದಾಣಕ್ಕೆ ಹೋಗಿ ಬೆಂಗಳೂರಿಗೆ ಹೋಗುವ ಗಾಡಿಯಲ್ಲಿ ಕುಳಿತೆವು. ನಾನು ಮೂರನೆ ತರಗತಿ ಟಿಕೆಟ್ಟನ್ನು ಕೊಂಡುಕೊಂಡಿದ್ದೆ. ನಾವು ಕುಳಿತಾಗ ಡಬ್ಬಿಯಲ್ಲಿ ಐದಾರು ಪ್ರಯಾಣಿಕರಿದ್ದರು. ಗಾಡಿ ಹೊರಡುವ ಹೊತ್ತಿಗೆ ಕಡೆಯ ಪಕ್ಷ ಐವತ್ತು ಜನವಾದರೂ ಕುರಿ ದೊಡ್ಡಿಗೆ ತುಂಬಿದಂತೆ ಅದರಲ್ಲಿ ತುಂಬಿಕೊಂಡರು. ನನ್ನ ಮನಸ್ಸೆಲ್ಲ ‘ಚಿನ್ನದ ನಾಲಗೆ’ ಮೇಲೆ ಇತ್ತು. ರೈಲು ಹೊರಡಲು ಘಂಟೆ ಬಾರಿಸಿತು. ನನ್ನ ಹಿರಿಯ ಮಿತ್ರರೆಲ್ಲರೂ ಫಲಪುಷ್ಪ ಗಳನ್ನು ನನ್ನ ಹಸ್ತದಲ್ಲಿಟ್ಟು ಸುಖ ಪ್ರಯಾಣ ಕೋರಿದರು. ನಾನು ತಿರುಪತಿ ತಲಪಿದ ಮೇಲೆ ಕಾಗದ ಬರೆಯಬೇಕೆಂದು ಲಿಂಗಪ್ಪನವರೂ ಗೋಪಾಲನೂ ಒತ್ತಿ ಹೇಳುತ್ತಿದ್ದರೂ ನನ್ನ ಕಣ್ಣುಗಳು ಸಿದ್ದಪ್ಪನವರನ್ನೇ ಹುಡುಕುತ್ತಿ ದ್ದವು. ಬಂಡಿ ಹೊರಟೇ ಬಿಟ್ಟಿತು. ಇನ್ನೇನು ಗತಿ, ಹರಕೆಯೇ ಇಲ್ಲವಲ್ಲ! ಅನ್ನಿಸಿತು. ನನ್ನ ಮನಸ್ಸು ‘ ದೇವರಿಗೆ ಕಣ್ಣಿಲ್ಲವೆ? ನಮ್ಮದೇನಪ್ಪ ತಪ್ಪು?’ ಎಂದು ಅಕ್ಕಸಾಲಿಯ ಮೇಲೆ ಆ ತಪ್ಪನ್ನು ಹೊರಿಸಿತು. ಅಷ್ಟರಲ್ಲಿ ಹರಕೆ ಯನ್ನು ಕೈಯಲ್ಲಿ ಹಿಡಿದು ಓಡಿ ಓಡಿ ಬಂದರು ಸಿದ್ದಪ್ಪ. ನನಗೆ ಧೈರ್ಯ ಬಂತು. ನಾವು ಕುಳಿತಿದ್ದ ಡಬ್ಬಿಯನ್ನು ಮುಟ್ಟಿ ಕಿಟಕಿಯಿಂದ ಹೊರಗೆ ಚಾಚಿದ್ದ ನನ್ನ ಕೈಗೆ ಹರಕೆಯನ್ನು ತುರುಕಿದರು. ಅವರಿಗೆ ಉಪಚಾರದ

ಮಾತನ್ನು ಸಲ್ಲಿಸುವಷ್ಟರಲ್ಲಿ ಗಾಡಿ ಧಾವಿಸಿ ಮುಂದೆ ಹೊರಟಿತು. ಹೊಗೆ ಬಂಡಿ ದೂರವಾದಂತೆಲ್ಲಾ ಗೆಳೆಯರೆಲ್ಲಾ ಕಣ್ಮರೆಯಾದರು.

ಹೊಗೆ ಬಂಡಿ ದಾರಿಯನ್ನು ಹಿಂದಕ್ಕೆ ತಳ್ಳುತ್ತಾ, ತನ್ನಲ್ಲಿದ್ದ ಜೀವಿಗಳ ಜವಾಬ್ದಾರಿಯನ್ನು ಹೊತ್ತ ಹೆಮ್ಮೆಯಿಂದ ಭುಗುಭುಗಿಸುತ್ತ ಹೊರಟಿತು. ಭತ್ತದ ಗದ್ದೆಯ ಹಸುರು ಬಯಲು ದಾರಿಯ ಇಕ್ಕಡೆಗಳಲ್ಲೂ ಹಾಸಿತ್ತು. ಆ ಬಯಲೆಲ್ಲಾ ಸೂರ್ಯನ ಬಿಸಿಲಿಗೆ ಹಸುರು ಗಾಜು ಹಾಸಿದಂತೆ ಮಿರುಗುತ್ತಿತ್ತು. ನಾನು ಕಿಟಕಿಯಿಂದ ಹೊರಗೆ ತಲೆ ಹಾಕಿ ಬಿಸಿಲಿಗೆ ಮಿರುಗಿ ಗಾಳಿಯ ತಾಡನಕ್ಕೆ ನಾನಾ ವಿನ್ಯಾಸದಿಂದ ಬಳುಕಿ ನರ್ತಿಸುತ್ತಿದ್ದ ವಿಸ್ತಾರವಾದ ಗದ್ದೆಯ ಪಚ್ಚೆಪೈರನ್ನೇ ಕಣ್ಣರಳಿಸಿ ನೋಡುತ್ತಿದ್ದೆ. ಇದ್ದಕ್ಕಿದ್ದ ಹಾಗೆ ನನ್ನ ಮನಸ್ಸಿನಲ್ಲಿ ಒಂದು ಚಿಂತೆ ಮೂಡಿತು.

'ಸಂಗಡ ಯಾರನ್ನಾದರೂ ಕರೆದುಕೊಂಡು ಹೋಗಿದ್ದರೆ ಚೆನ್ನಾಗಿತ್ತು. ಮನುಷ್ಯನ ದೇಹಸ್ಥಿತಿ ಯಾವ ಘಳಿಗೆಯಲ್ಲಿ ಏನೋ ?' ಎಂದು ತೋರಿತು. ನಮ್ಮ ಸಂಗಡಲೆ ಅವರ ಊರಿಗೆ ಪ್ರಯಾಣ ಮಾಡುತ್ತಿದ್ದ ನನ್ನ ಮಾವನವರನ್ನು—

"ನೀವೂ ಹೊರಡಿ ನಮ್ಮ ಸಂಗಡ" ಎಂದೆ. ಅವರು ಒಂದೇ ಉಸಿರಿಗೆ ಹೊಲ, ಗದ್ದೆ, ದನ, ಕರು ಇತ್ಯಾದಿ ತಮ್ಮ ಸಂಸಾರದ ತಾಪತ್ರಯವನ್ನೆಲ್ಲಾ ಹೇಳಿಬಿಟ್ಟರು.

"ಯಾರೂ ಬೇಕಿಲ್ಲ. ದೇವರಿದ್ದಾನೆ ಬಿಡಿ" ಎಂದಳು ಲಕ್ಷ್ಮಿ.

ನಮ್ಮ ಬಂಧುಗಳು ಚನ್ನಪಟ್ಟಣದ ರೈಲ್ವೆ ನಿಲ್ದಾಣದಲ್ಲಿ ಇಳಿದು ನಮ್ಮನ್ನು ಬೀಳ್ಕೊಟ್ಟು ಹೋದರು. ರೈಲುಗಾಡಿ ರಾತ್ರೆ ಏಳೂವರೆ ಗಂಟೆಗೆ ಬೆಂಗಳೂರನ್ನು ಸಮಿೀಪಿಸಿತು. ಬೆಂಗಳೂರು ನಗರ ಸಹಸ್ರ ಸಹಸ್ರ ಸಂಸಾರಿಗಳ ಸಂತೆಯ ಪಟ್ಟಣ. ವಿದ್ಯುತ್ ಶಕ್ತಿಯ ದೀಪಗಳು ವಿಶಾಲವಾದ ಆ ನಗರದ ಹೆಮ್ಮೆಯನ್ನೂ ವೈಭವವನ್ನೂ ಸೂಚಿಸುತ್ತಾ ಉರಿಯುತ್ತಿದ್ದುವು. ನನ್ನ ಹತ್ತಿರವಿದ್ದ ರಂಗಸ್ವಾಮಿ ಕೇಳಿದ :

"ಅಬ್ಬಬ್ಬ ! ಎಷ್ಟೊಂದು ದೀಪಗಳಿವೆ ! ಎಷ್ಟು ಜನ ಇದ್ದಾರಪ್ಪ ?"

"ಎಷ್ಟೋ ಲಕ್ಷ ಜನ ಇದ್ದಾರೆ."

"ಅವರಿಗೆಲ್ಲಾ ಮನೆ ಮಠ ಇವೆಯೆ ಅಪ್ಪಾ ?"

"ಎಲ್ಲರಿಗೂ ಇಲ್ಲ, ಮಗೂ."

"ಮತ್ತೆ ? ನಿದ್ದೆ ಎಲ್ಲಿ ಮಾಡ್ತಾರೆ ಅಪ್ಪಾ ?"

"ಕೆಲವರು ಬಾಡಿಗೆ ಮನೇಲಿ ಇರ್ತಾರೆ. ಬಾಡಿಗೆಗೆ ಗತಿ ಇಲ್ಲದ ಭಿಕ್ಷುಕರು ಬೀದಿಯಲ್ಲೊ ಚಾವಡಿಯಲ್ಲೊ ವಾಸಮಾಡುತ್ತಾರೆ."

ಅಷ್ಟರಲ್ಲಿ ಬೆಂಗಳೂರು ನಿಲ್ದಾಣಕ್ಕೆ ಬಂಡಿ ಬಂದಿತು. ನಿಲ್ದಾಣದಲ್ಲಿ ಜನರು ತಮ್ಮ ತಮ್ಮ ಬಂಧುಗಳಿಗಾಗಿ, ಸ್ನೇಹಿತರಿಗಾಗಿ ಎದುರುನೋಡುತ್ತಾ ಗುಂಪು ಗುಂಪಾಗಿ ಸಂಶಯ, ಕುತೂಹಲ, ಹರ್ಷ ಸಂಯಮಗೊಂಡ ದೃಷ್ಟಿ ಯನ್ನು ಬೀರುತ್ತಾ ಕಾದಿದ್ದರು. ನಾವು ಅಲ್ಲಿ ಇಳಿದು, ಪಕ್ಕದಲ್ಲೇ ಇದ್ದ ಭೋಜನ ಶಾಲೆಯೊಂದಕ್ಕೆ ನುಗ್ಗಿದೆವು. ನನಗಂತೂ ಊಟವಿಲ್ಲದಿದ್ದರೂ ಗ್ಯಾಲರ್ಗಟ್ಟಲೆ ಕಾಫಿ ಬೇಕು. ರಂಗಸ್ವಾಮಿಗೆ ಊಟಕ್ಕಿಂತಲೂ ಕುರುಕು ತಿಂಡಿಯ ಮೇಲೆ ಬಲು ಆಸೆ. ಕುರುಕು ತಿಂಡಿ ಪೊಟ್ಟಣವೊಂದು ಅವನ ಜೇಬಿಗೆ ಬಿದ್ದುದರಿಂದ "ಊಟ ಬೇಕಿಲ್ಲ" ಎಂದ. ಲಕ್ಷ್ಮಿಗೆ ಊಟಕ್ಕೆ ಹದಿನಾಲ್ಕಾಣೆ ಕೊಟ್ಟು ಒಂದು ಟಿಕೆಟ್ಟನ್ನು ಕೊಂಡುಕೊಟ್ಟೆ. ಸ್ತ್ರೀಯರಿಗೆ ಬೇರೆ ಕೊಠಡಿಗಳಿರಲಿಲ್ಲ. ಅವಳು ಒಂದು ಮೂಲೆಯಲ್ಲಿ ಕುಳಿತು ಊಟದ ಶಾಸ್ತ್ರವನ್ನು ಮುಗಿಸಿ ಬಂದಳು. ತುಸು ದೂರದಲ್ಲಿ ಕುಳಿತಿದ್ದ ಉದ್ದನೆಯ ಮೂಗಿನ ನನಗೆ ಹುಳಿಮೊಸರಿನ ವಾಸನೆಯು ಮೇಲೆ ಬಂದು ಬೀಳುತ್ತಿತ್ತು. ಜನರು ಹಸಿದ ಹೊಟ್ಟೆಯನ್ನು ತಣಿಸಲೋ ಅಥವಾ ಹದಿನಾಲ್ಕು ಆಣೆ ಕೊಟ್ಟಿರುವ ಹೊಟ್ಟೆಕಿಚ್ಚಿಗೊ ಯಾವುದನ್ನೂ ಬಿಡಲಿಲ್ಲ. 'ಪಾಪ ನಾಳೆ ಯಾವ ಯಾವ ಆಸ್ಪತ್ರೆ ಔಷಧಿ ಹೊಟ್ಟೆಗೆ ಹಾಕುತ್ತಾರೊ!' ಅನ್ನಿಸಿತು ನನಗೆ. ಮದ್ರಾಸು ಕಡೆಗೆ ಹೋಗುವ ರೈಲಿನ ಮೂರನೆ ತರಗತಿ ಗಾಡಿಯಲ್ಲಿ ಹೆಂಗಸರು, ಮಕ್ಕಳು ಪ್ರಯಾಣ ಮಾಡುವುದು ಸುಲಭವಲ್ಲ. ಈ ಅನುಭವ ನನಗೆ ಹಿಂದೆ ಒಂದು ಸಾರಿ ಆಗಿತ್ತು. ನಾನು ಆ ಅನುಭವದ ಪರಿಣಾಮದಿಂದ ಕಾಟಪಾಡಿಯವರೆಗೆ ಎರಡನೆಯ ತರ ಗತಿಯ ಟಿಕೆಟ್ಟನ್ನು ಕೊಂಡೆ, ದುಡ್ಡು ಜೇಬಿನ ತುಂಬಾ ಇದ್ದುದರಿಂದಲ್ಲ. ಬಂಡಿ ಎಂಟೂವರೆ ಘಂಟೆಗೆ ನಿಲ್ದಾಣಕ್ಕೆ ಬಂದಿತು. ಬಂಡಿ ಬರುತ್ತಿದ್ದಾಗಲೆ ಜನ ಜೇನು ಮುತ್ತಿದಂತೆ ಮುತ್ತಿಕೊಂಡರು. ಅನೇಕರು ಕಿಟಕಿಯ ಮೂಲಕ ತಲೆಯನ್ನು ಪೆಟ್ಟಿಗೆಯ ಒಳಕ್ಕೆ ಚಾಚಿ ನುಗ್ಗುತ್ತಿದ್ದಾಗ, ಅವರ ಕಾಲಿನ ಒದೆಗಳ ಸೇವೆ ಹೊರಗಡೆ ನಿಂತಿದ್ದವರಿಗೆ ನಡೆಯುತ್ತಲೇ ಇತ್ತು. ನಾವು ಮೂವರೂ ಎರಡನೆ ತರಗತಿ ಪೆಟ್ಟಿಗೆಯಲ್ಲಿ ಸುಖವಾಗಿ ಕುಳಿತೆವು. ಬಂಡಿ ಹೊರಡುವುದು ಇನ್ನೂ ಒಂದು ಘಂಟೆ ಇತ್ತು. ನಾನೂ ರಂಗ ಸ್ವಾಮಿಯೂ ಸ್ವಲ್ಪ ಹೊತ್ತು ನಿಲ್ದಾಣದಲ್ಲಿ ಅಲೆದಾಡಿದೆವು. ಬಂಡಿ

ಒಂಬತ್ತೂವರೆ ಘಂಟೆಗೆ ಸರಿಯಾಗಿ ನಿಲ್ದಾಣವನ್ನು ಬಿಟ್ಟಿತು. ನಿಲ್ದಾಣದಲ್ಲಿ ಅಲೆಯುತ್ತಿದ್ದ ಕೆಲವು ಸೈನ್ಯದ ಅಧಿಕಾರಿಗಳು ಬಂಡಿ ಹೊರಟ ಮೇಲೆ ಚಂಗನೆ ಹಾರಿ ಬಂದು ಮೇಲಿದ್ದ ಹಲಗೆಗಳ ಮೇಲೆ ಕಾಲು ಚಾಚಿಕೊಂಡು ಹಾಯಾಗಿ ಬಿದ್ದುಕೊಂಡರು. ಅಧಿಕಾರಿಗಳ ಉಡುಪು, ಸೈನ್ಯದ ದರ್ಪವನ್ನು ಸೂಚಿಸುತ್ತಿತ್ತಾದರೂ ಅವರೆಲ್ಲರೂ ನರಪೇತನಾರಾಯಣರು. ಅಡಕೆ ಮರದ ಉದ್ದ, ಗಾತ್ರ ಇದ್ದರು. "ನೀವೆಲ್ಲಾ ಎಲ್ಲಿಗೆ ಹೊರಟಿರುವಿರಿ?" ಎಂದು ಅವರನ್ನು ಆಂಗ್ಲಬಾಷೆಯಲ್ಲಿ ಕೇಳಿದೆ.

"ಕಾಶ್ಮೀರದ ಎಲ್ಲೆಯ ರಕ್ಷಣೆಗೆ" ಎಂದರು ಆಂಗ್ಲಬಾಷೆಯಲ್ಲಿ, ಆಂಗ್ಲರ ಠೀವಿ ದರ್ಪ ಬೆರತ ಧ್ವನಿಯಲ್ಲಿ.

ನಾನು ಮನಸ್ಸಿನಲ್ಲೇ ಅಂದುಕೊಂಡೆ: 'ಇವರ ದೇಹಶಕ್ತಿ, ಹುಮ್ಮಸ್ಸು ಎಷ್ಟು ಸಾಧ್ಯವಾದೀತೋ ಕಾಶ್ಮೀರದ ಗಡಿಯನ್ನು ಪಾಕೀಸ್ಥಾನದ ಧಾಳಿಯಿಂದ ಸಂರಕ್ಷಿಸುವುದಕ್ಕೆ!' ಎಂದು.

ನಾನು ಕುಳಿತಿದ್ದಎದುರು ಸೀಟಿನಲ್ಲಿ ಕೆಲವು ಹೆಂಗಸರು ಮತ್ತು ಒಬ್ಬ ಗಂಡಸು ಕುಳಿತಿದ್ದರು. ಗಂಡಸು ಹೆಂಗಸರಿಗೆ ಸುಖವಾಗಿ ನಿದ್ರೆ ಮಾಡಿಸಬೇಕೆಂಬ ಉದ್ದೇಶದಿಂದ ಹಾಸಿಗೆಯನ್ನು ಮೇಲಿಂದ ಕೆಳಗಡೆ ಸೀಟಿಗೆ, ಕೆಳಗಡೆಯಿಂದ ಮೇಲಿನ ಸೀಟಿಗೆ ಹಾಸುತ್ತಲೇ ಇದ್ದ. ಅಕ್ಕಪಕ್ಕದಲ್ಲಿದ್ದವರನ್ನು ಬೇಡಿ ಒಂದೆರಡು ಅಂಗುಲ ಜಾಗವನ್ನು ಯಾಚಿಸಿಕೊಳ್ಳುತ್ತಿದ್ದ. ತಲೆದಿಂಬು ಒಂದು ಸಾರಿ ಉತ್ತರಕ್ಕೂ ಮತ್ತೊಂದು ಸಾರಿ ದಕ್ಷಿಣಕ್ಕೂ ಬರುತ್ತಲೇ ಇತ್ತು. ಅನಂತರ ಹೆಂಗಸರಲ್ಲಿ ಯಾರು ಹಾಸಿಗೆಯಮೇಲೆ ಮಲಗಿಕೊಳ್ಳಬೇಕೆಂಬುದನ್ನು ತೀರ್ಮಾನಿಸಲು ತಮಿಳು ಭಾಷೆಯಲ್ಲಿ ಒಂದು ಪಂಚಾಯಿತಿಯೆ ನಡೆದು ಬಿಟ್ಟಿತು. ಕಡೆಗೆ ರೇಷ್ಮೆ ಆಹಾರಕ್ಕೆ ಒಳಗಾಗದೆ ಬೆಳೆದಿದ್ದ ಶರೀರದ ಹೆಂಗಸಿಗೆ ಲಭಿಸಿತು–ಹಾಸಿಗೆ. ಆ ಗಂಡಸು ಬೆಂಚಿನ ಕೆಳಗೆ ಎರಡು ಮೊಳದ ಒಂದು ಚೌಕವನ್ನು ಹಾಸಿ, ಹಾಗೆಯೆ ತೂರಿಕೊಂಡು ಕಾಲುಗಳನ್ನು ಮುದುರಿಕೊಂಡು ಗೊರಕೆ ಹೊಡೆಯಲು ಪ್ರಾರಂಭಿಸಿದ. ಅವರೆಲ್ಲಾ ಮದ್ರಾಸು ಕಡೆಯವರು. ಅವರಲ್ಲಿ ಹದಿನಾರು ವಯಸ್ಸಿನ ತರುಣಿಯೊಬ್ಬಳು ಮಾತ್ರ ವಿಶಾಲವಾದ ಕಣ್ಣುಗಳನ್ನು ಮಿಟಮಿಟನೆ ಬಿಡುತ್ತಾ, ನನ್ನ ಎದುರು ಸೀಟಿನಲ್ಲಿ ಕುಳಿತೇ ಇದ್ದಳು. ಕೊಡಗಿನ ಹೆಂಗಸರು ಕಟ್ಟಿಕೊಳ್ಳುವಂತೆ ಒಂದು ಕರಿಯ ರೇಶ್ಮೆಯ ಚೌಕದಿಂದ ತನ್ನ ಕೇಶರಾಶಿಯನ್ನು ಮುಚ್ಚಿಕೊಂಡಿದ್ದಳು. ರಂಗ

ಸ್ವಾಮಿಯ ದೃಷ್ಟಿ ಆ ತರುಣಿಯ ಕಡೆ ಬಿದ್ದು ಕುತೂಹಲ ಕೆರಳಿ ಕೇಳಿದ:

"ಅದೇಕಪ್ಪಾ, ಆ ಅಮ್ಮನ ಹುಬ್ಬುಗಳು ಅಂಚಿಕಡ್ಡಿ ಗಾತ್ರ ಇವೆಯಲ್ಲ?" ಎಂದು.

ಆ ಸ್ತ್ರೀ ರಂಗಸ್ವಾಮಿಯ ಕಡೆ ಕಣ್ಣು ಹೊರಳಿಸಿ ಹುಸಿನಗು ನಗುತ್ತಾ ಪಕ್ಕದಲ್ಲಿದ್ದ ವರ್ತಮಾನಪತ್ರಿಕೆಯನ್ನು ಮುಖಕ್ಕೆ ಮುಚ್ಚಿಕೊಂಡಳು.

"ಲೋ, ಸುಮ್ಮನೆ ಇರೊ" ಎಂದೆ ನಾನು ಪಿಸುಪಿಸನೆ.

"ಅದೇಕೆ, ಹೇಳಪ್ಪ?" ಎಂದು ಪುನಃ ಮೊದಲುಮಾಡಿದ.

"ಹುಬ್ಬುಗಳನ್ನು ಕತ್ತರಿಸಿ ತಿದ್ದಿಕೊಂಡಿದ್ದಾಳೆ, ಲಕ್ಷಣವಾಗಿ ಕಾಣಿಸಲಿ ಅಂತ"

—ಎಂದು, ನಾನು ಅವನ ಕಿವಿಯಲ್ಲಿ ಪಿಸುಗುಟ್ಟಿದೆ. ಹುಡುಗನ ಬುದ್ಧಿ ಸುಮ್ಮನಿರುತ್ತದೆಯೆ? 'ಹುಡುಗು ಬುದ್ಧಿಯೊ ಗಿಡ ಬಿದ್ದೆಯೊ' ಅನ್ನುವ ಹಾಗೆ.

"ಅಲ್ಲಿ ನೋಡಪ್ಪ! ಕಣ್ಣಿನ ಸುತ್ತ ಕರಿ ಬಣ್ಣ ಬಳೆದುಕೊಂಡಿದ್ದಾಳೆ. ಅದೇಕೆ?"

ನನಗೆ ಒಳ್ಳೆ ಪೀಕಲಾಟಕ್ಕೆ ಸಿಕ್ಕಿಕೊಂಡಂತಾಯಿತು. ಆಕೆಗೆ ಕೇಳಿಸುತ್ತಾ ಇದೆ, ಈ ಹುಡುಗ ಉತ್ತರ ಹೇಳದಿದ್ದರೆ ಬಿಡುವ ಹಾಗಿಲ್ಲ.

"ಕಣ್ಣು ಕಪ್ಪು; ಲಕ್ಷಣಕ್ಕೆ ಹಚ್ಚಿಕೊಳ್ಳುತ್ತಾರೆ ಹೆಂಗಸರು"

"ಅದೇನು ಲಕ್ಷಣವೊ; ಮಸಿ ಬಳೆದ ಹಾಗಿದೆ—ಕಣ್ಣಿನ ಸುತ್ತ"

ನಾನು ಬಾಯಿ ಬಿಡಲಿಲ್ಲ. ಸರಿ, ಮತ್ತೆ ಪ್ರಾರಂಭವಾಯಿತು:

"ಗಡಿಯಾರ ನೋಡಪ್ಪ! ಬಲದ ಕೈಗೆ ಕಟ್ಟಿಕೊಂಡಿದ್ದಾಳೆ" ಎಂದ.

"ಯಾವ ಕೈಗಾದರೂ ಕಟ್ಟಿಕೊಳ್ಳಲಿ, ತೆಪ್ಪನೆ ಇರೊ" ಎಂದು ಪಿಸುನುಡಿಯಲ್ಲಿ ಛೀಗುಟ್ಟಿದೆ.

ಲಕ್ಷ್ಮಿ ನಮ್ಮ ಸಂಭಾಷಣೆಯನ್ನು ಕೇಳದಿದ್ದವಳಂತೆ ಕೇಳುತ್ತಾ ಮುಗುಳನಗೆ ನಗುತ್ತಿದ್ದಳು.

ಅವರ ತಾಯಿಯ ಕಡೆ ತಿರುಗಿ "ಆ ಅಮ್ಮನ ಕೈಯಲ್ಲಿ ಒಂದು ಬಳೆಯೂ ಇಲ್ಲ ನೋಡವ್ವ!" ಎಂದ.

ಈ ಹುಡುಗನ ಮಾತೆಲ್ಲ ಆ ತರುಣಿಯ ಕಿವಿಯ ಮೇಲೆ ಬಡಿಯುತ್ತಲೇ ಇದ್ದುವು. ಅವನ ತಾಯಿ ಮೌನವ್ರತವನ್ನೇ ತಾಳಿಬಿಟ್ಟಳು, ಮಗನ

ಪ್ರಶ್ನೆ ಕೇಳಿ. ಅಷ್ಟರಲ್ಲಿ, ವರ್ತಮಾನಪತ್ರಿಕೆಯು ಆ ತರುಣಿಯ ಮುಖವನ್ನು ಸಂಪೂರ್ಣವಾಗಿ ಮುಚ್ಚಿತ್ತು.

"ಯಾವ ಊರಿಗೆ ಹೋಗ್ತಾರಪ್ಪ, ಅವರು?" ಎಂದು ಪುನಃ ಪ್ರಾರಂಭಿಸಿದ.

"ಛೆ, ಛೆ, ಎಲ್ಲಿಗಾದರೂ ಹೋಗಲಿ. ನಮಗೇತಕ್ಕೆ ಅದೆಲ್ಲ. ನೀನು ಮಲಗು ಇನ್ನು" ಎಂದೆ. ಅಷ್ಟರಲ್ಲಿ ಆ ತರುಣಿಗೆ ನಿದ್ರಾದೇವಿಯ ಪ್ರಭಾವ ಹಿಡಿಯಿತು. ತಂಗಾಳಿ ಬೇರೆ ಹಿತವಾಗಿ ಕಿಟಕಿಯಿಂದ ಬೀಸುತ್ತಿತ್ತು. ಒಂದೆರಡು ಸಾರಿ ಆಕಳಿಸಿ, ರೈಲುಗಾಡಿ ಹೋಗುವ ತೂಗಾಟಕ್ಕೆ ಹಿಂದಕ್ಕೂ ಮುಂದಕ್ಕೂ ಓಲಾಡತೊಡಗಿದಳು. ತನ್ನ ತೋಳನ್ನೇ ತಲೆದಿಂಬು ಮಾಡಿಕೊಂಡು, ಇಕ್ಕಟ್ಟಾದ ಜಾಗದಲ್ಲೆ ಮುದುರಿಕೊಂಡು ಮಲಗಿದಳು. ರಂಗಸ್ವಾಮಿ ತೂಕಡಿಸುತ್ತಿದ್ದು ನಿದ್ರೆಯ ಆಲಿಂಗನದಲ್ಲಿ ಸಿಕ್ಕಿಹೋದ. ಲಕ್ಷ್ಮಿಯೂ ಕಿಟಕಿಯ ಮೇಲೆ ತಲೆ ಇಟ್ಟುಕೊಂಡೇ ನಿದ್ದೆಮಾಡತೊಡಗಿದಳು. ನನ್ನನ್ನು ಮಾತ್ರ ನಿದ್ರಾದೇವಿ ಮುಟ್ಟಲಿಲ್ಲ. ಆಕೆ ಅಷ್ಟಾದರೂ ಕರುಣೆ ತೋರಿದಳಲ್ಲ! ಏಕೆಂದರೆ ನಾವು ಕಾಟಪಾಡಿಯಲ್ಲಿ ಇಳಿದು ಬೇರೆ ರೈಲು ಹತ್ತಿ ತಿರುಪತಿಗೆ ಹೋಗಬೇಕಾಗಿತ್ತು. ನಿದ್ದೆಯಲ್ಲಿದ್ದಾಗ ಕಾಟಪಾಡಿ ನಿಲ್ದಾಣದಲ್ಲಿ ಇಳಿಯದೆ ಮುಂದೆ ಹೊರಟು ಹೋದರೆ ತೊಂದರೆಯಾಗುತ್ತದೆಂಬ ಅಳುಕು ನನ್ನ ಬೆನ್ನು ಹತ್ತಿತ್ತು. ರೈಲುಗಾಡಿ ಆ ನಿಶೆಯ ಗರ್ಭವನ್ನು ಭೇದಿಸಿಕೊಂಡು ಗಡಗಡನೆ ಹೋಗುತ್ತಿತ್ತು. ಅದರ ಮುಂದಿನ ಬೆಳಕಿಗೆ ಕಂಬಿಗಳು ಬೆಳ್ಳಿಯ ಗೆರೆಗಳಂತೆ ಹೊಳೆಯುತ್ತಿದ್ದುವು. ರೈಲು ಅನೇಕ ನಿಲ್ದಾಣಗಳಲ್ಲಿ ನಿಂತು ಬೆಳಗಿನ ಮೂರು ಘಂಟೆಗೆ ಕಾಟಪಾಡಿ ನಿಲ್ದಾಣವನ್ನು ತಲಪಿತು. ನಾನು ರಂಗಸ್ವಾಮಿಯನ್ನೂ ಲಕ್ಷ್ಮಿಯನ್ನೂ ಎಚ್ಚರಿಸಿದೆ. ಸಾಮಾನುಗಳನ್ನೆಲ್ಲಾ ತೆಗೆದುಕೊಂಡು ನಾವು ಅಲ್ಲಿ ಇಳಿದೆವು. ವಿದ್ಯುಚ್ಛಕ್ತಿಯ ದೀಪಗಳು ಪ್ರಕಾಶವಾಗಿ ಉರಿಯುತ್ತಿದ್ದುವು.

ತಿರುಪತಿಗೆ ಹೋಗುವ ಗಾಡಿ ಇನ್ನೂ ಬಂದಿರಲಿಲ್ಲ. ತಡೆಯಲಾರದ ಸೆಕೆ. ಉರಿವ ಕುಲುಮೆಯ ಹತ್ತಿರ ಇದ್ದಹಾಗಿತ್ತು. ಅಲ್ಲಿದ್ದ ನಲ್ಲಿಯಲ್ಲಿ ಮೂವರೂ ಕೈ ಕಾಲು ಮುಖ ತೊಳೆದುಕೊಂಡೆವು. ಆ ರೈಲ್ವೆ ನಿಲ್ದಾಣದ ಸುತ್ತ ನೂರಾರು ಸಂಸಾರಗಳಿದ್ದುವು. ಅವೆಲ್ಲಾ ಭಿಕ್ಷುಕರ ಸಂಸಾರ. ಹಾಸಿದ್ದ ಕಡಪ ಕಲ್ಲಿನ ಮೇಲೆ ಭಿಕ್ಷುಕ ಸ್ತ್ರೀ ಪುರುಷರು ಚಿಂದಿ ಚಿಂದಿ ಅರಿವೆಯನ್ನುಟ್ಟು ಅರೆ ಬೆತ್ತಲೆಯಲ್ಲಿ ಬಿದ್ದಿದ್ದರು. ತಲೆಯ ಪಕ್ಕದಲ್ಲಿ ತಿರುಪೆ

ಮಾಡಿ ತಂದ ಕೂಳಿನ ಒಡೆದ ಮಡಕೆಗಳು ವಿನಾ ಅವರ ಆಸ್ತಿ ಮತ್ತೇನೂ ಇರಲಿಲ್ಲ. ನಾನು ಎಲ್ಲಾ ಭಿಕ್ಷುಕರನ್ನು ನೆಟ್ಟನೋಟದಿಂದ ನೋಡಿದೆ. ನನ್ನ ಕಣ್ಣುಗಳು ಹನಿಗಣ್ಣಾದುವು. ಒಬ್ಬ ತಾಯಿ ತನ್ನ ಹಸುಗೂಸೊಂದನ್ನು ಎದೆಗೆ ಅಪ್ಪಿಕೊಂಡು ಮಲಗಿದ್ದಳು. ನಡುವಿನಿಂದ ಕೆಳಕ್ಕೆ ಮಾತ್ರ ನಾಲ್ಕು ಮೊಳದ ಹರಿದ ಹಳೆಯ ಸೀರೆಯನ್ನು ಸುತ್ತಿದ್ದಳು. ಬತ್ತಿ ಹೋಗಿದ್ದ ತಾಯಿಯ ಸ್ತನಗಳನ್ನು ಆ ಕೂಸು ಜಿಗಿದು ಜಿಗಿದು ಹಾಲು ಹೀರಲು ಪ್ರಯತ್ನಿಸುತ್ತಿತ್ತು. ಹಾಲು ಬಾಯಿಗೆ ಬಾರದೆ ವಿಲವಿಲನೆ ಒದ್ದಾಡಿ ಅಳುತ್ತಿತ್ತು. ತಾಯಿ ಮಾತ್ರ ನಿಶ್ಚಿಂತಳಾಗಿ ಯಾವುದೊ ಭವ್ಯಸುಂದರ ಸ್ವಪ್ನದಲ್ಲಿ ತಲ್ಲೀನಳಾಗಿದ್ದಳು. ಆಕೆಯ ಪಕ್ಕದಲ್ಲಿ ಮತ್ತೆರಡು ಸಣ್ಣ ಹುಡುಗಿಯರು ಮಲಗಿದ್ದರು. ನೀರು ಎಣ್ಣೆ ಕಾಣದ ಗುಂಗುರು ತಲೆ, ಬೆತ್ತಲೆ ಶರೀರದ ಮೇಲೆ ಗೇಣುದ್ದ ಕೊಳೆ, ಇಂಥ ಮಕ್ಕಳು ಎಷ್ಟೋ ಅಲ್ಲಿ ಮಲಗಿದ್ದುವು. ವಿದ್ಯುಚ್ಛಕ್ತಿಯ ಬೆಳಕು ಬಡಜೀವಿಗಳ ಬಾಳನ್ನು ಎತ್ತಿ ಹಿಡಿದು ತೋರಿಸುತ್ತಿತ್ತು. ಆ ದೃಶ್ಯ ನನ್ನ ಸ್ಮೃತಿಪಥದಲ್ಲಿ ಚಿರಮುದ್ರೆಯನ್ನು ಒತ್ತಿದೆ. ಲಕ್ಷ್ಮಿಯೂ ಕೂಡ ಮೂಗಿನ ಮೇಲೆ ಬೆರಳಿಟ್ಟುಕೊಂಡಳು : ' ಇಷ್ಟೊಂದು ಭಿಕ್ಷುಕರು ಅರೆಬೆತ್ತಲೆಯಾಗಿಯೇ ಮಲಗಿದ್ದಾರಲ್ಲಾ! ' ಎಂದು.

ಅಷ್ಟರಲ್ಲಿ ತಿರುಪತಿಗೆ ಹೋಗುವ ಗಾಡಿ ಬಂದಿತು. ನಾವು ಮೂವರೂ ಹತ್ತಿ ಕುಳಿತೆವು. ರೈಲ್ವೆ ನಿಲ್ದಾಣದ ಸುತ್ತಲಿಂದ ದುರ್ವಾಸನೆ ಬಡಿಯುತ್ತಿತ್ತು. ನಗರಾಭಿವೃದ್ಧಿಯವರು ನೈರ್ಮಲ್ಯದ ಕಡೆ ಹೆಚ್ಚು ಗಮನ ಕೊಟ್ಟಂತೆ ಕಾಣಲಿಲ್ಲ. ನಮ್ಮ ಮೈಸೂರು ಸೀಮೆ ನೈರ್ಮಲ್ಯದಲ್ಲಿ ಸಾವಿರ ಪಾಲು ಮೇಲು ಅನ್ನಿಸಿತು, ನನಗೆ. ಸುಮಾರು ಬೆಳಗಿನ ಐದು ಘಂಟೆ ಹೊತ್ತಿಗೆ ರೈಲು ಬಂಡಿ ಪೂರ್ವಾಭಿಮುಖವಾಗಿ ಹೊರಟಿತು. ಅಷ್ಟರಲ್ಲಿ ಪೂರ್ಣ ಬೆಳಗಾಯಿತು. ನಮ್ಮ ಹಾದಿಯ ಎಡಗಡೆಯೂ ಬಲಗಡೆಯೂ ತುಸು ದೂರದಲ್ಲಿ ಬೆಟ್ಟಗುಡ್ಡಗಳು ಕತ್ತಲೆಯ ಕಡಲಿಂದ ಹೊರಬಿದ್ದು ಭೀಮಾಕಾರವಾಗಿ ಜ್ಞಾನಮಗ್ನ ತಪಸ್ವಿಗಳಂತೆ ಗೋಚರಿಸುತ್ತಿದ್ದುವು. ನಸುಗೆಂಪು ಅಡರಿದ್ದ ಮೂಡಣ ದಿಗಂತದಂಚಿನ ಮೇಲೆ ಉಷಃನಕ್ಷತ್ರ ದೇದೀಪ್ಯಮಾನವಾಗಿ ಪ್ರಜ್ವಲಿಸುತ್ತಿತ್ತು. ತುಸು ಹೊತ್ತಿನಲ್ಲೇ ಮೂಡಣ ದಿಗಂತದಂಚಿನಲ್ಲಿ ನಸುಗೆಂಪು ಕಂಡು, ಕಡುಗೆಂಪು ಕವಿಯಿತು. ನಂತರ ಮೂಡಿದ ಅರುಣರಾಗದ ಪ್ರಭೆಯ ಪ್ರವಾಹದಲ್ಲಿ ಆ ತಾರೆ ಎಲ್ಲಿಯೋ ಕೊಚ್ಚಿಹೋಯಿತು. ಅಲ್ಲಲ್ಲಿ

ಸಣ್ಣ ಸಣ್ಣ ಗುಡಿಸಿಲುಗಳು ವಿನಾ ನಾಜೋಕಾದ ಮನೆಗಳು ಕಣ್ಣಿಗೆ ಬೀಳು ತ್ತಲೇ ಇರಲಿಲ್ಲ. ಆರೂವರೆ ಘಂಟೆಗೆ ರೈಲು ಗಾಡಿ ಚಿತ್ತೂರನ್ನು ತಲಪಿತು. ಸುಮಾರು ಐದು ಸಾವಿರ ಜನ ಸಂಖೆ ಇದೆ, ಅಲ್ಲಿ. ಅದು ಜಿಲ್ಲೆಯ ಮುಖ್ಯ ಪಟ್ಟಣ. ಹಿಂದೆ ಹೈದರನಿಗೂ ಇಂಗ್ಲಿಷರಿಗೂ ಯುದ್ಧ ನಡೆದ ಸ್ಥಳ. ಊರಿನ ಸಮಿಾಪದಲ್ಲೆ ಕಸದ ರಾಶಿ ಬಹುದೂರದವರೆಗೂ ಪುಟ್ಟ ಗುಡ್ಡಗಳ ಸಾಲಿನಂತೆ ಕಾಣಬರುತ್ತಿತ್ತು. ಊರ ಪಕ್ಕದ ನದಿಯಲ್ಲಿ ನೀರು ಒಂದು ತೊಟ್ಟಾದರೂ ಇರಲಿಲ್ಲ. ರೈತರು ಏತದ ಬಾವಿಗಳಿಂದ ನೀರು ಎತ್ತಿ ಅರ್ಧ ಎಕರೆ, ಕಾಲು ಎಕರೆಯಷ್ಟಕ್ಕೆ ಮಾತ್ರ ಭತ್ತ, ರಾಗಿ, ಕಬ್ಬಿನ ಬೆಳೆ ಹಾಕಿದ್ದರು. ಈಗಿನ ಆಹಾರದ ಅಭಾವಕಾಲದಲ್ಲಿ ಈ ತರಹ ಬೆಳೆದರೆ ಮದ್ರಾಸು ಪ್ರಾಂತ್ಯದ ರೈತರು ಎಷ್ಟು ಪ್ರಯೋಜನಕಾರಿಯಾಗಬಲ್ಲರು, ಆಹಾರ ಸಮಸ್ಯೆಯನ್ನು ಬಗೆಹರಿಸಲು! ಬೇಕಾದಷ್ಟು ಭೂಮಿ ಬೆಳೆ ಕಾಣದೆ ಬೆತ್ತಲೆ ಬಿದ್ದಿತ್ತು. ಭೂಮಿತಾಯಿಗೆ ಬೆಳೆಯೆ ಉಡಿಗೆ. ಜನರು ಉಡಲು ಬಟ್ಟೆ ಇಲ್ಲದೆ, ಉಣಲು ಹಿಟ್ಟಿಲ್ಲದೆ ಕೃಶವಾಗಿದ್ದರು. ಭೂಮಿದೇವಿಯೂ ಆ ಅರಬೆತ್ತಲೆಯ ಬೈರಾಗಿಗಳಂತೆ ಚಿಂದಿಯ ಪೈರುಟ್ಟು ಬಡಕಲಾಗಿದ್ದಂತೆ ಕಾಣಿಸಿದಳು.

ರೈಲು ಏಳು ಘಂಟೆಗೆ ಪಾಕಾಲ ನಿಲ್ದಾಣಕ್ಕೆ ಬಂದಿತು. ಇದೊಂದು ಜಂಕ್ಷನ್ ಸ್ಥಳ. ಗುಂತಕಲ್ಲು ಮದನಪಲ್ಲಿ ಕಡೆಗೆ ರೈಲುಮಾರ್ಗಗಳಿವೆ. ನಾವು ಅಲ್ಲಿ ಇಳಿದು ಇಡ್ಲಿ, ದೋಸೆ ತಿಂದೆವು. ನನಗೆ ಆಶ್ಚರ್ಯವಾಯಿತು! ನಮ್ಮ ಮೈಸೂರು ಸೀಮೆಯಲ್ಲಿ–ಅದರಲ್ಲೂ ಮಂಡ್ಯ, ಮೈಸೂರು ಡಿಸ್ಟ್ರಿಕ್ಟುಗಳಲ್ಲಿ– ಯಥೇಚ್ಛವಾಗಿ ಭತ್ತ ಬೆಳೆಯುತ್ತದೆ. ಅಲ್ಲಿಯೂ ಇಷ್ಟು ಅಗ್ಗವಾಗಿ ಅಕ್ಕಿ ಯಿಂದ ದೋಸೆ, ಕಡುಬು ಮಾಡುವುದಿಲ್ಲವಲ್ಲ, ಎಂದು. ನಮ್ಮ ಗಾಡಿಯಲ್ಲಿ ಪ್ರಯಾಣಿಕರು ಹೆಚ್ಚಿಗೆ ಇರಲಿಲ್ಲ. ತಿರುಪತಿಯಿಂದ ಕೆಲವು ಪಂಡಾಗಳು ಯಾತ್ರಿಕರನ್ನು ಸ್ವಾಗತಿಸಲು ಅಲ್ಲಿಗೆ ಬಂದಿದ್ದರು. ನಾವು ಕುಳಿತಿದ್ದ ಡಬ್ಬಿಗೆ ಒಬ್ಬನು ಬಂದು,

"ತಮ್ಮದು ಯಾವ ಊರು, ಸ್ವಾಮಿ?" ಎಂದ. ಆ ಪಂಡಾಗಳು ಇವರೇ ಯಾತ್ರಿಕರು ಎಂಬುದನ್ನು ತಿಳಿಯವುದರಲ್ಲಿ ಪ್ರವೀಣರು. ಅದು ಅವರ ಹೊಟ್ಟೆಪಾಡಿಗಾಗಿ ಪಡುವ ನಿತ್ಯಕರ್ಮ. ನಾನು, "ಮೈಸೂರು" ಎಂದೆ. ಸರಿ. ಕೃತಕ ನಗುಮುಖವನ್ನು ಪ್ರದರ್ಶಿಸುತ್ತಾ ತನ್ನ ಪುಸ್ತಕದ ಗಂಟನ್ನು ಸರಸರನೆ ಬಿಚ್ಚಿದ.

"ನೋಡಿ ಸ್ವಾಮಿ, ಸುಬ್ರಹ್ಮಣ್ಯಂ ಅಯ್ಯರು ಬಂದಿದ್ದರು ಮೈಸೂರಿನಿಂದ, ಈಗ್ಗೆ ಒಂದು ವರ್ಷದಲ್ಲಿ. ನಮ್ಮ ಮನೆಯಲ್ಲೇ ಇಳಿದುಕೊಂಡಿದ್ದರು.

—ಎಂದು ಇನ್ನೂ ಕೆಲವು ದೊಡ್ಡ ದೊಡ್ಡವರ ಹೆಸರುಗಳನ್ನು ಹೇಳಿ, ಜೀರ್ಣವಾಗಿದ್ದ ಒಂದು ಕೈ ಬರಹದ ಪುಸ್ತಕವನ್ನು ತೆರೆದು ನನ್ನ ಮುಖದ ಎದುರು ಹಿಡಿದನು. ಯಾವ ಮನುಷ್ಯನಿಗಾದರೂ ತನ್ನ ಊರು, ತನ್ನ ಜನ, ತನ್ನ ಭಾಷೆಯನ್ನು ಕೇಳಿದರೆ ಮನಸ್ಸಿಗೆ ಒಂದು ತರಹ ಹರ್ಷವಾಗುತ್ತದೆ. ನಮ್ಮ ಅರಿವಿಲ್ಲದೆ ಹೃದಯ ಗುಹೆಯಲ್ಲಿ ಆತ್ಮೀಯ ಭಾವ ಇಣುಕುತ್ತದೆ. ನಾನು, ಒಂದು ಹಳ್ಳಿಯವನೆಂದೆ.

"ನಿಮ್ಮ ಹಳ್ಳಿಯ ಹೆಸರೇನು? ಹೇಳಿ ಸ್ವಾಮಿ" ಎಂದು ಆತ ನಾನು ಹೇಳುವವರೆಗೂ ಬಿಡಲಿಲ್ಲ.

"ನೋಡಿ ಸ್ವಾಮಿ, ಈಗ್ಗೆ ಇಪ್ಪತ್ತು ವರ್ಷಗಳಿಂದಲೂ ಬರುತ್ತಾರೆ, ಹೆಮ್ಮನಹಳ್ಳಿ ಪುಟ್ಟಶೆಟ್ಟರು" ಎಂದು, ಶೆಟ್ಟರು ಸಹಿ ಹಾಕಿದ್ದ ಒಂದು ಹಾಳೆಯನ್ನು ನನಗೆ ತೋರಿಸಿದ. ಅದು ಹೇಗಾದರೂ ಇರಲಿ. ನಮ್ಮೂರಿನ ಪುಟ್ಟಶೆಟ್ಟರು ಅನೇಕ ಸಾರಿ ಯಾತ್ರೆ ಮಾಡಿದ್ದಾರೆ ಆಗಿನ ಕಾಲಗಳಲ್ಲಿ ಛತ್ರಗಳಿರಲಿಲ್ಲ. ನಿಜವಿದ್ದರೂ ಇರಬಹುದು, ಎನ್ನಿಸಿತು ನನ್ನ ಮನಸ್ಸಿಗೆ. ಆತನ ಮೇಲೆ ನನಗೆ ಪ್ರೀತಿ ಹುಟ್ಟಿತು.

"ಆಗಲಪ್ಪ, ನಿನ್ನ ವಿಳಾಸ ಕೊಡು. ಸಾಧ್ಯವಾದರೆ ಬರುತ್ತೇನೆ" ಎಂದೆ.

"ಖಂಡಿತ ಬರಬೇಕು ಸ್ವಾಮಿ. ಛತ್ರದಲ್ಲಿ ನಿಮಗೆ ನಮ್ಮ ಮನೆಯಷ್ಟು ಅನುಕೂಲ ದೊರೆಯಲಾರದು"

—ಎಂದು ಹೇಳಿ, ತಲೆಬಾಗಿ ಕೈಮುಗಿದು ತನ್ನ ಮನೆಗೆ ಬೇರೆ ಯಾತ್ರಿಕರನ್ನು ಹಿಡಿಯಲು ಹೊರಟ. ಅವನು ಕೆಲವರನ್ನಾದರೂ ಕರೆದುಕೊಂಡು ಹೋಗುತ್ತಾನೆಂದು ನನಗೆ ನಂಬಿಕೆಯಾಯಿತು. 'ಈ ಕೆಲಸಕ್ಕೆ ಬದಲು ಇನ್ಷೂರೆನ್ಸ್ ಏಜೆಂಟಾಗಿದ್ದರೆ ಸುಖವಾಗಿರುತ್ತಿದ್ದನಲ್ಲ!' ಎಂದುಕೊಂಡೆ.

ಪಾಕಾಲದಿಂದ ಏಳೂವರೆ ಘಂಟೆಗೆ ಬಂಡಿ ಹೊರಟಿತು. ದಾರಿಯುದ್ದಕ್ಕೂ ಅರ್ಧ ಮೈಲಿ ದೂರದಲ್ಲೇ ಬೆಟ್ಟದ ಸಾಲುಗಳು ಹಬ್ಬಿದ್ದುವು. ಮಳೆ ಇಲ್ಲದಿದ್ದುದರಿಂದ ಅಷ್ಟು ಹೊತ್ತಿಗೇ ಸೆಕೆ ಆರಂಭವಾಯಿತು. ರೈಲು

ಮಾರ್ಗದ ಎರಡು ಪಕ್ಕದಲ್ಲೂ ಕಲ್ಲುಮಿಶ್ರವಾದ ಭೂಮಿಯಲ್ಲಿ ಕುರುಚಲು ಗಿಡಗಳು ಬೆಳೆದಿದ್ದುವು. ಬಲಗಡೆ ಎತ್ತರವಾದ ಬೆಟ್ಟಗಳು ಒಂದನ್ನೊಂದು ಬಾಚಿ ತಬ್ಬಿದ್ದು ಹಸುರುಡುಗೆಯುಟ್ಟಂತೆ ಭೀಮ ಭವ್ಯವಾಗಿದ್ದವು. ಇಕ್ಕಡೆಗಳಲ್ಲೂ ಒಂದೊಕ್ಕೊಂದು ಹೆಣೆದುಕೊಂಡಿದ್ದ ಬೆಟ್ಟದ ಸಾಲುಗಳನ್ನು ಹಿಂದೆ ಮಾಡಿ ಒಂಬತ್ತೂವರೆ ಘಂಟೆಗೆ ಸರಿಯಾಗಿ ರೈಲುಗಾಡಿ ತಿರುಪತಿಯನ್ನು ಸೇರಿತು. ಪೂರ್ವ ಘಟ್ಟಗಳನ್ನು ತಬ್ಬಿ ಪಶ್ಚಿಮಾಭಿಮುಖವಾಗಿ ಹಬ್ಬಿರುವ ಶೇಷಾಚಲವೆಂಬ ಸುಂದರ ಶೈಲಗಳ ಬುಡದಲ್ಲಿ ಹರಡಿದೆ ತಿರುಪತಿ. ರೈಲ್ವೆ ನಿಲ್ದಾಣ ಬಹಳ ಚಿಕ್ಕದು. ತಿರುಪತಿಯೂ ದೊಡ್ಡ ಪಟ್ಟಣವಲ್ಲ

## ೨. ಚಿನ್ನದ ಗಿರಿ

ರೈಲು ಇಳಿದವರೇ ನಾವು ಮೂವರೂ ನಮ್ಮ ಗಂಟು ಮೂಟೆಗಳನ್ನು ಹಿಡಿದುಕೊಂಡು ನೇರವಾಗಿ ದೇವಸ್ಥಾನದ ಛತ್ರಕ್ಕೆ ಹೋದೆವು. ರೈಲ್ವೆ ನಿಲ್ದಾಣದ ಸಮೀಪದಲ್ಲೇ ಇದೆ ಛತ್ರ. ಅಲ್ಲಿನ ಅಧಿಕಾರಿಗಳು ೨೨ ನೆ ನಂಬರು ಕೊಠಡಿಯಲ್ಲಿ ಇಳಿದುಕೊಳ್ಳುವಂತೆ ನನಗೆ ಹೇಳಿದರು. ದೇವಸ್ಥಾನದ ಛತ್ರದಲ್ಲಿ ಅನೇಕ ದೊಡ್ಡ ದೊಡ್ಡ ಕೊಠಡಿಗಳಿವೆ. ಅವುಗಳನ್ನೆಲ್ಲಾ ಯಾತ್ರಿಕರಿಗಾಗಿ ಬಹು ನಾಜೋಕಾಗಿ ಕಟ್ಟಿದ್ದಾರೆ. ಪ್ರತಿಯೊಂದು ಕೊಠಡಿಯಲ್ಲಿಯೂ ವಿದ್ಯುಚ್ಛಕ್ತಿಯ ದೀಪಗಳಿವೆ. ಸ್ನಾನದ ಮನೆ, ಅಡಿಗೆ ಮನೆ, ಕಕ್ಕಸು—ಎಲ್ಲವೂ ಅಚ್ಚುಕಟ್ಟಾಗಿವೆ. ನೀರಿನ ಸರಬರಾಜೂ ಕೂಡ ಚೆನ್ನಾಗಿದೆ. ಆ ಛತ್ರದ ಪೌಳಿಯ ಒಳಭಾಗದಲ್ಲೇ ಭೋಜನಶಾಲೆಯೊಂದಿದೆ. ಅಂಗಡಿ ಮುಂಗಟ್ಟುಗಳೂ ಇವೆ. ಇದೂ ಅಲ್ಲದೆ, ಯಾತ್ರಿಕರಿಗೋಸ್ಕರ ಒಂದು ಉಚಿತ ಔಷಧಾಲಯವೂ ವಾಚನಾಲಯವೂ ಇವೆ. ಹೊರ ಅಂಗಣದಲ್ಲಿ ಒಂದು ರೇಡಿಯೊವನ್ನು ಕೂಡ ಇಟ್ಟಿದ್ದಾರೆ. ಅಡಿಗೆ ಮಾಡಿಕೊಳ್ಳಲು ಬಿಟ್ಟಿಯಾಗಿ ಪಾತ್ರೆಗಳನ್ನೂ ಒದಗಿಸುತ್ತಾರೆ, ಇಲ್ಲಿ. ಇಷ್ಟೆಲ್ಲ ಸೌಕರ್ಯಗಳು ನಮ್ಮ ಮನೆಗಳಲ್ಲೂ ಇರುವುದಿಲ್ಲ. ಛತ್ರದ ಅಂಗಳದಲ್ಲಿ ನೀರಿನ ಕೃತಕಬುಗ್ಗೆಯೊಂದು ಇದೆ. ಅದರ ಸುತ್ತಲೂ ಗುಲಾಬಿ, ಮಲ್ಲಿಗೆ ಹೂವಿನ ಗಿಡಗಳನ್ನು ಬೆಳೆಸಿದ್ದಾರೆ. ಅದರ ಮಧ್ಯೆ ಸರಸ್ವತಿಯ ವಿಗ್ರಹವೊಂದಿದೆ. ಶಾರದೆಯು ಕಿರೀಟಧಾರಿಣಿಯಾಗಿ ನವಿಲಿನ ಮೇಲೆ ಕುಳಿತು ವೀಣಾನಾದ ಮಾಡುತ್ತಿದ್ದಾಳೆ. ದೇವಿಯ ಮುದ್ದಾದ ಮುಖದಲ್ಲಿ ನಗೆ ಸುಳಿದಂತೆ

ಕಾಣಿಸುತ್ತಿತ್ತು. ಆ ವಿಗ್ರಹ ಪಕ್ಕದಲ್ಲಿ ತಿರುಗುವವರನ್ನೆಲ್ಲ ಆಕರ್ಷಿಸುತ್ತದೆ.

ಲಕ್ಷ್ಮಿ ನಮ್ಮ ಕೊಠಡಿಯನ್ನು ಗಂಗಾಮಾತೆಯಿಂದ ಪವಿತ್ರಮಾಡಿದಳು. ಛತ್ರದ ಅಧಿಕಾರಿಗಳಿಂದ ನಮಗೆ ಬೇಕಾದ ಕೆಲವು ಪಾತ್ರೆಗಳನ್ನು ತೆಗೆದುಕೊಂಡೆ. ಅವೆಲ್ಲವನ್ನೂ ರಂಗಸ್ವಾಮಿಯೇ ಹೊತ್ತು ನಮ್ಮ ಕೊಠಡಿಗೆ ಸಾಗಿಸಿದ, ಬರಿ ಒಂದು ಆಣೆಯ ಆಸೆಗೆ. ಒಂಡೆರಡು ಸೇರು ಅಕ್ಕಿಯೂ ಕೂಡ ನಮ್ಮ ಗಂಟಿನಲ್ಲಿ ತಿರುಪತಿ ಯಾತ್ರೆಗೆ ಬಂದಿತ್ತು. ಜೊತೆಯಲ್ಲಿ ಸಂಬಾರದ ಪುಡಿ ತರುವುದನ್ನು ಲಕ್ಷ್ಮಿ ಮರೆತಿರಲಿಲ್ಲ. ಹೆಂಗಸರು ಸೂಕ್ಷ್ಮ ದೃಷ್ಟಿಯುಳ್ಳವರು. ಪರಸ್ಥಳದಲ್ಲಿ ಅಟ್ಟು ಉಣ್ಣಬೇಕಾದರೆ ಮುಖ್ಯವಾದ ವಸ್ತುಗಳನ್ನು ಮೊದಲೇ ಆರಿಸಿ ತರುವರು. ನಾವು ಅಡಿಗೆ ಕೆಲಸವನ್ನು ತಾಳಿ ಕಟ್ಟುವಾಗ ಹೆಂಗಸರ ಕತ್ತಿಗೆ ಕಟ್ಟಿಬಿಡುತ್ತೇವೆ. ಐಶ್ವರ್ಯವಂತರು—ಭಟ್ಟರ ಕತ್ತಿಗೊ ಅಥವಾ ನಾಯರನ ಕತ್ತಿಗೊ ಕಟ್ಟಿ ಕೃತಕೃತ್ಯರಾದೆವೆಂದುಕೊಳ್ಳಬಹುದು. ಆದರೆ ನನ್ನ ಅನುಭವದಲ್ಲಿ ಹೇಳುವುದಾದರೆ ಮಡದಿ ತನ್ನ ಅಮೃತ ಹಸ್ತದಿಂದ ಅಡಿಗೆ ಮಾಡಿ ಬಡಿಸಿದರೆ ಆಗುವಷ್ಟು ತೃಪ್ತಿ ಬೇರೊಬ್ಬರಿಂದ ಬಂದೀತೆ? ಗಂಡಸಿನ ಕೈಯಿಂದ ಬಂದ ಅಡಿಗೆಯಂತೂ ಶುದ್ಧ ನೀರಸ. 'ಭೋಜ್ಯೇಷು ಮಾತಾ' ಎಂಬ ಕೀರ್ತಿ ಹೆಣ್ಣಿಗೆ ಮೀಸಲಾದದ್ದೇ ಹೊರತು ಗಂಡಸು ಹೇಗೆ ಅದನ್ನು ಆಕ್ರಮಿಸಿಯಾನು? ಲಕ್ಷ್ಮಿ ತಣ್ಣೀರಿನಲ್ಲಿ ಸ್ನಾನಮಾಡಿ ಅಡಿಗೆ ಮಾಡಿದಳು. ನನಗೆ ಏಕೋ ಮೈಗೆ ಆಲಸ್ಯ ಕಂಡ ಹಾಗೆ ಆಯಿತು. ಛತ್ರದಲ್ಲಿ ನಾಲ್ಕು ಆಣೆ ಕೊಟ್ಟು ರಂಗಸ್ವಾಮಿ ಮತ್ತು ನಾನು ಬಿಸಿನೀರು ಸಾನ್ನ ಮಾಡಿದೆವು. ಸ್ನಾನಕ್ಕೆ ಬಿಸಿನೀರಿಗಿಂತ ತಣ್ಣೀರೆ ಮೇಲಾಗಿತ್ತು.

ಹನ್ನೊಂದು ಘಂಟೆ ಸುಮಾರಿಗೆ ಬಿಸಿಲಿನ ಜಳ ಸಹಿಸಲಸಾಧ್ಯವಾಯಿತು. ಅಡಿಗೆಯಾದ ಕೂಡಲೆ ಎಲೆಯ ಮೇಲೆ ಒಂದಷ್ಟು ಮೀಸಲನ್ನು ಎಡೆ ಹಾಕಿ, ಶ್ರೀ ವೆಂಕಟಾಚಲಸ್ವಾಮಿಗೆ ಅರ್ಪಿಸಿ, ಮಂಗಳಾರತಿಯನ್ನು ಮಾಡಿದಳು, ರಂಗಸ್ವಾಮಿಯ ತಾಯಿ. ಮೊದಲು ಭಿಕ್ಷುಕರಿಗೆ ಅನ್ನ ಹಾಕಿ ಅನಂತರ ಊಟ ಮಾಡಬೇಕೆಂಬ ಉದ್ದೇಶದಿಂದ ಮೂವರೂ ಹೊರ ಜಗುಲಿಯಲ್ಲಿ ಸ್ವಲ್ಪ ಹೊತ್ತು ಭಿಕ್ಷುಕರನ್ನು ನಿರೀಕ್ಷಿಸುತ್ತಾ ಕುಳಿತೆವು. ಹಿಂದಿನ ಬಾಗಿಲು ಸದ್ದಾಯಿತು. ಇದೇಕೆ ಬಾಗಿಲು ತೆರೆಯಿತೆಂದು ಮೂವರೂ ಕುತೂಹಲದಿಂದ ಕೋಣೆಗೆ ಹೋಗಿ ನೋಡುವಲ್ಲಿ ನಮ್ಮ ತಾತನ ಮುತ್ತಾತನ ಹಿಂದಿನ ತಲೆಮಾರಿನ ಪೀಳಿಗೆಯ ಆದಿಪುರುಷ, ಪೂಜಿ

ಸಿದ್ದ ಮಾಸಲು ಅನ್ನವನ್ನು ಗಂಭೀರವಾಗಿ ತಿನ್ನುತ್ತಿದ್ದ! "ಲೇ ಕೋತಿ, ಹುಂ" ಎಂದ ರಂಗಸ್ವಾಮಿ, ಅರ್ಧ ಮಟ್ಟಕ್ಕೆ ಬಗ್ಗಿ ಕಪಿಯಂತೆಯೆ ತನ್ನ ಮೂತಿಯನ್ನು ಉದ್ದ ಮಾಡಿಕೊಂಡು. ಆ ಕಪಿ ಈ ಹುಡುಗನನ್ನು 'ಘೊರ್' ಎಂದು ಬೆದರಿಸಿತು. ಹುಡುಗ ಚಂಗನೆ ಹಾರಿ ನನ್ನ ಮರೆಹೊಕ್ಕ. ಹುಡುಗರದೂ ಕಪಿಚೇಷ್ಟೆ. ಮೊದಲೇ ಅದು ಕೋತಿ. ಎರಡೂ—ಬೆರೆತರೆ ಕೇಳಬೇಕೆ ಚೇಷ್ಟೆಯನ್ನು. ಕೋತಿ ಅನ್ನವನ್ನು ಸಂಪೂರ್ಣವಾಗಿ ತಿಂದು ಹೊರಟಿತು. ವೆಂಕಟಾಚಲಪತಿಯ ದೂತನಾದ ಕಪಿಯಾದರೂ ಮೊದಲು ಊಟ ಮಾಡಿಹೋಯಿತಲ್ಲಾ ಎಂದು ನಮಗೆ ಬಹಳ ಸಂತೋಷವಾಯಿತು. ನಾನೂ ಊಟಕ್ಕೆ ಕುಳಿತೆ. ನನ್ನ ನಾಲಗೆ ರುಚಿ ಕೆಟ್ಟಿತ್ತು. ಜ್ವರ ಸ್ವಲ್ಪ ಸ್ವಲ್ಪವಾಗಿ ಮೈಯಲ್ಲಿ ಅಲೆ ಬಂದ ಹಾಗೆ ಬರುತ್ತಿದ್ದುದು ಅರಿವಾಗುತ್ತಿತ್ತು. ನಾಡಿಗಳೂ ಬಹು ಬೇಗ ಬೇಗ ಮಿಡಿಯುತ್ತಿದ್ದುವು. ಸರಿ, ಊಟದ ಶಾಸ್ತ್ರವನ್ನು ಮುಗಿಸಿ, ಜಮಖಾನೆ ಹಾಸಿ ಮಲಗಿದೆ. ಬಿಸಿಲಿನ ತಾಪದಿಂದ ಕುಲುಮೆಯ ಹತ್ತಿರ ಇದ್ದ ಹಾಗಿತ್ತು. ಆ ಹವದಲ್ಲಿ ಜ್ವರ ಬಂದರೆ ಕೇಳಬೇಕೆ! ನಾನು ಬರುವಾಗ ಊಹಿಸಿದ ಹಾಗೆಯೇ ಆಯಿತಲ್ಲ! ದೇವರು ಒಳ್ಳೆ ಪೇಚಾಟಕ್ಕೆ ಸಿಕ್ಕಿಸಿದನಲ್ಲ, ಎಂದುಕೊಂಡೆ ಮನಸ್ಸಿನಲ್ಲಿ. ನನ್ನ ಮೈಯಲ್ಲಿ ಜ್ವರವಿರುವುದನ್ನು ನೋಡಿ ಲಕ್ಷ್ಮಿ ಮುಖ ಇಳಿಬಿಟ್ಟಳು. 'ನಾಳೆ ಗಿರಿಯ ಮೇಲೆ ಎರಡು ರೂಪಾಯಿ ಹೆಚ್ಚಾಗಿ ಕಾಣಿಕೆ ಹಾಕುತ್ತೇನೆ. ಜ್ವರ ಸಾಯಂಕಾಲದ ಹೊತ್ತಿಗೆ ಬಿಟ್ಟುಹೋಗಲಿ, ದೇವರೆ' ಎಂದು ಹರಿಕೆ ಮಾಡಿಕೊಂಡಳು. ಕಷ್ಟದಲ್ಲಿರುವ ಮನುಷ್ಯನ ಮನಸ್ಸು ಪಲ್ಲಟವಾಗುವುದು ಸಹಜ. ನನಗೆ ಜ್ವರ ಉಕ್ಕಿ ಉಕ್ಕಿ ಬಂದಿತು. ಹೊದೆದಿದ್ದ ಬಟ್ಟೆಯೂ ಸುಡತೊಡಗಿತು. ಅಂತಹ ಸಂದರ್ಭದಲ್ಲಿ ದೇವರೇ ಗತಿ ಎನ್ನದೆ ವೈದ್ಯರೇ ಗತಿ ಎನ್ನುವುದಕ್ಕಾಗುತ್ತದೆಯೆ? ನಂಬಿಕೆಯೇ ಫಲಸಿದ್ಧಿಗೆ ಕಾರಣ ಎನ್ನುವ ತತ್ವ ಲಕ್ಷ್ಮಿಯ ನಾಡಿಗಳಲ್ಲಿ ಹರಿಯುತ್ತಿತ್ತು. ಆ ತತ್ವದಲ್ಲಿ ನನಗೂ ಕೊಂಚ ನಂಬಿಕೆ ಇದೆ. ಛತ್ರದಲ್ಲಿದ್ದ ಔಷಧಾಲಯವೂ ಕೂಡ ಮುಚ್ಚಿತ್ತು. ನನಗೆ ಮನಸ್ಸು ಕಸವಿಸಿಯಾಗುತ್ತಿತ್ತು, ಜ್ವರ ಬಿಡುತ್ತದೆಯೋ ಅಥವಾ ನನ್ನ ಬೆನ್ನು ಹತ್ತುತ್ತದೆಯೋ ಎಂದು. ನಾಲ್ಕು ಘಂಟೆ ಹೊತ್ತಿಗೆ ಜ್ವರ ಕಡಿಮೆಯಾಯಿತು. ಆದ್ದರಿಂದ ನಮ್ಮ ಮೂವರ ಮನಸ್ಸಿಗೂ ಗೆಲುವಾಯಿತು.

ಅಲಮೇಲಮಂಗಾಪುರದಲ್ಲಿರುವ ಅಮ್ಮನವರ ದೇವಸ್ಥಾನಕ್ಕೆ ಹೋಗಬೇಕೆಂದು ಮನಸ್ಸಾಯಿತು, ನನಗೆ. ಅಲಮೇಲ ಮಂಗಮ್ಮನವರ ದೇವ

ಸ್ಥಾನಕ್ಕೆ ತಿರುಪತಿಗೆ ಬರುವ ಯಾತ್ರಿಕರೆಲ್ಲ ಸಾಮಾನ್ಯವಾಗಿ ಹೋಗುತ್ತಾರೆ. ಆಕೆ ಪಕ್ಷಿರಾಜನ ಮಗಳಂತೆ. ಶ್ರೀನಿವಾಸನು ತಿರುಪತಿಗೆ ಬಂದಾಗ ಆಕೆಯಲ್ಲಿ ಅನುರಕ್ತನಾದನಂತೆ. ತಿರುಪತಿಗೆ ಮೂರು ಮೈಲಿ ದೂರದಲ್ಲಿದ್ದ ಅಲ್ಲಿಗೆ, ಒಂದು ಕುದುರೆಗಾಡಿ ಗೊತ್ತುಮಾಡಿಕೊಂಡು ಐದು ಘಂಟೆಗೆ ಹೊರಟೆವು. ಬಿಸಿಲಿನ ಜಳ ಮುಖಕ್ಕೆ ಎರಚುತ್ತಿತ್ತು. ಆ ರಸ್ತೆಯಲ್ಲಿ ಒಂದೊಂದು ಕಡೆ ಒಂದು ಮೊಳಕ್ಕೆ ಕಡಿಮೆ ಆಳವಿಲ್ಲದ ಗುಂಡಿಗಳಿದ್ದುವು. ಅದನ್ನು ಯಾವ ಕಾಲದಲ್ಲಿ ಸರಿಮಾಡಿಸಿದ್ದರೋ ಇಂಜನಿಯರ್ ಇಲಾಖೆಯವರೇ ಬಲ್ಲರು! ಅಜ್ಜಿಯ ಹಲ್ಲುಗಳಂತೆ ಅಲ್ಲಾಡುತ್ತಿದ್ದ ಗಾಡಿಗೆ ಕಟ್ಟಿದ್ದ ಜೀರ್ಣ, ಶೀರ್ಣ ದೇಹದ ಕುದುರೆ ಮನುಷ್ಯನು ನಡೆದು ಹೋಗುವ ವೇಗಕ್ಕಿಂತ ಹೆಚ್ಚು ವೇಗದಲ್ಲಿ ಓಡುತ್ತಿರಲಿಲ್ಲ. ಆ ಕುದುರೆಯನ್ನು ನೋಡಿ ನನಗೆ ತೆನ್ನಾಲಿ ರಾಮಕೃಷ್ಣನು ಸಾಕಿದ್ದ ಕುದುರೆ ತನ್ನನ್ನು ನೋಡಲು ಬಂದ ಮುದಿ ಸಾಹೇಬರ ಬಿಳಿಯ ಗಡ್ಡವನ್ನೇ ಹುಲ್ಲೆಂದು ಭ್ರಮಿಸಿ ಗಬಕ್ಕನೆ ಗಡ್ಡವನ್ನು ಕಚ್ಚಿಕೊಂಡುದುದರ ನೆನಪು ಮನದಲ್ಲಿ ಚಿಮ್ಮಿ ಬಂದು, ನನ್ನಷ್ಟಕ್ಕೆ ನಾನೇ ನಗುತ್ತಿದ್ದೆ. ನಮ್ಮ ಬಡಕಲು ಕುದುರೆಗಾಡಿ ಕುಲುಕಿ ಕುಲುಕಿ ನನಗೂ ಬೆನ್ನೆಲ್ಲಾ ನೋಯುತ್ತಿತ್ತು. ಐದೂವರೆ ಘಂಟೆಗೆ ಅಲಮೇಲಮಂಗಾಪುರವನ್ನು ತಲಪಿದೆವು. ದೇವಸ್ಥಾನದ ಎದುರು ಒಂದು ದೊಡ್ಡ ಕಲ್ಯಾಣಿ ಇದೆ. ನೀರು ಬಹಳ ಕಾಲದಿಂದ ತಂಗಿರುವುದರಿಂದ ಅದು ಹಸುರು ಬಣ್ಣಕ್ಕೆ ತಿರುಗಿದೆ. ಅಲ್ಲಿ ನಾವು ಕೈಕಾಲು ತೊಳೆದುಕೊಂಡು ಕಡ್ಡಿ ಕರ್ಪೂರ ತೆಗೆದುಕೊಳ್ಳಲು ಒಂದು ಅಂಗಡಿಗೆ ಹೋದೆವು.

"ವಾಂಗೋ, ಸಾಮಿ" ಎಂದು ಹಲ್ಲುಕಿರಿದ ಆ ಅಂಗಡಿಯವನು. ಮಸಿ ಬಳಿದಂತಿದ್ದ ಅವನ ಮುಖದಲ್ಲಿ ಬಿಳಿಯ ಹಲ್ಲುಗಳು ಚಿತ್ರಿಸಿದಂತಿದ್ದು ಗುಳಿ ಬಿದ್ದ ಕಣ್ಣಾಲಿಗಳು ವಂಚನೆಯ ದೃಷ್ಟಿಯಿಂದ ಕ್ಷುದ್ರವಾಗಿ ಮಿಣಿಮಿಣಿಗುಟ್ಟುತ್ತಿದ್ದವು. ಒಂದು ಬಿದಿರು ತಟ್ಟೆಯನ್ನು ತೆಗೆದುಕೊಂಡು, ಎರಡು ತೆಂಗಿನಕಾಯಿ, ಒಂದು ಚಿಪ್ಪು ಬಾಳೆಹಣ್ಣು, ಹತ್ತು ಗಂಧದ ಕಡ್ಡಿ, ಒಂದು ಬೊಗಸೆ ಅರಿಶಿನದ ಪುಡಿ, ಒಂದು ಬೊಗಸೆ ಕುಂಕುಮದ ಪುಡಿ, ಮೂರು ಉಂಡೆ ಕರ್ಪೂರ, ಮೂರು ಬಿಳಿ ನಾಮದ ತುಂಡುಗಳು, ಒಂದು ಬೊಗಸೆಯಷ್ಟು ಸಾಂಬ್ರಾಣಿ ಇಟ್ಟ. ಪಕ್ಕದಲ್ಲಿದ್ದ ಹೂವಾಡಿಗಿತ್ತಿ ಒಂದು ಮೊಳ ಉದ್ದದ ವಾಸನೆ ಇಲ್ಲದ ಹೂವನ್ನು ಆ ತಟ್ಟೆಗೆ ಹಾಕಿ "ರೊಂಡಣ" ಎಂದಳು. ಇವರಿಬ್ಬರ ವರ್ತನೆ ನನ್ನನ್ನು ಮೂಕನನ್ನಾಗಿ ಮಾಡಿತು! ಆಕೆ

ಮಾರುತ್ತಿದ್ದ ಹೂವಿನ ಸುಗಂಧಕ್ಕೂ ಆಕೆಯ ಕೊಳೆ ಉಡುಪಿನ ದುರ್ಗಂಧಕ್ಕೂ ವಾಯುಮಂಡದಲ್ಲಿ ತಿಕ್ಕಾಟವಾಗಿ ಕೊನೆಗೆ ಸುಗಂಧಕ್ಕೆ ಜಯ ಲಭಿಸಿದುದು ಅಲ್ಲಿ ನನ್ನ ಅಂತರ್ಯದೃಷ್ಟಿಗೆ ಗೋಚರಿಸುತ್ತಿತ್ತು. ಇದು ಸಹವಾಸ ದೋಷವಲ್ಲವೆ ? ಸತ್ಸಂಗದಿಂದ ಸದ್ಭಾವನೆಗಳು ಮೂಡಿ ಆತ್ಮೋನ್ನತಿಯ ಮಾರ್ಗದತ್ತ ಮಾನವನನ್ನು ಎಳೆಯುವುವು.

"ಇದೆಲ್ಲಾ ಏತಕ್ಕಯ್ಯ, ಯಾರಯ್ಯ ಇದೆಲ್ಲಾ ಕೊಡು ಎಂದವರು ?" ಎಂದೆ. ಅಂಗಡಿಯವನು ಹಲ್ಲುಕಿರಿಯುತ್ತ,

"ಎಲ್ಲಾದರು ಉಂಟೆ ಸಾಮಿ, ಇಷ್ಟು ಬೇಕು ಸಾಮಿ ; ಎಲ್ಲಾ ತಕೋತಾರೆ, ಸಾಮಿ; ಹೆಚ್ಚಿಲ್ಲ, ಮೂರು ರೂಪಾಯಿ ನಾಲಣ ಕೊಡಂಗೊ" ಎಂದ. ಅಷ್ಟರಲ್ಲಿ ನನಗೆ ಕೋಪ ಬಂದೇ ಇತ್ತು.

"ಬುದ್ಧಿ ನೆಟ್ಟಗಿದೆಯೆ, ನಿನಗೆ ? ಅರಿಯದ ಯಾತ್ರಿಕರ ಹತ್ತಿರ ಎಷ್ಟು ಸುಲಿಗೆ ಮಾಡಿದ್ದೀ? ಯಾರಿಗಯ್ಯ ಕೋಡಂಗಿಟೋಪಿ ಹಾಕುವುದು? ಮೊದಲು ಇದೆಲ್ಲಾ ತೆಗೆದುಕೊ" ಎಂದು ದರ್ಪದಿಂದ, ಕೈಗೆ ಸಿಕ್ಕಿದ ಗಮಾರನನ್ನು ಪೋಲೀಸಿನವನು ಬೆದರಿಸುವ ಠೀವಿಯಿಂದ ಆಜ್ಞಾಪಿಸಿದೆ. ಆತ ಪೆಚ್ಚುಮೋರೆ ಹಾಕಿಕೊಂಡು ಹೇಳಿದ :

"ಏನ್ನಾತಕೆ ಸಾಮಿ, ಕೋಪ. ಹೋಗಲಿ ರೊಂಡು ರೂಪಾಯಿ ಪನ್ನಂಡಣ ಕೊಡಂಗೊ."

"ಮೊದಲು ಸಾಮಾನು ತೆಗೆ. ನಾನು ಹೇಳಿದಷ್ಟು ಕೊಡು" ಎಂದು ಇನ್ನು ಸ್ವಲ್ಪ ದರ್ಪದಿಂದ ಹೇಳಿದೆ. ನಮ್ಮ ಊರಿಗೆ ಮಂಗನಾಗಿದ್ದರೂ ಪರರ ಊರಿಗೆ ರಂಗ ನಾನು. ಪುನಃ ಬಾಯಿ ಬಿಡಲಿಲ್ಲ ಆತ. ಎಲ್ಲವನ್ನೂ ಹಿಂದಕ್ಕೆ ತೆಗೆದುಕೊಂಡು,

"ಎನ್ನೆನ್ನ ಬೇಕು, ನೀನೆ ಹೇಳು, ಸಾಮಿ" ಎಂದ ಬಗ್ಗಿದ ತಲೆಯನ್ನು ಮೇಲೆತ್ತದೆ. ನನ್ನ ಮನಸ್ಸಿನ ಮೇಲೆ ಏನೇನೊ ಹೊಳೆದು ಮಿಂಚಿ ಹೋದುವು. 'ಏನು ಜನ, ದೇಗುಲದ ಮುಂದೆ ಕುಳಿತು ಇಷ್ಟೊಂದು ಮೋಸ ಮಾಡುತ್ತಾರೆ; ಅದರಲ್ಲೂ ಯಾತ್ರಿಕರಿಗೆ! ನಾವೆಲ್ಲ ದೇಶದೇಶದ ಮೂಲೆ ಮೂಲೆಗಳಿಂದ ಶ್ರದ್ಧೆ, ಭಯಭಕ್ತಿಗಳಿಂದ ಯಾತ್ರೆಗೆ ಬರುತ್ತೇವೆ. ಈ ಜನ ದೇವಸ್ಥಾನದ ಗೋಡೆಯ ಸುತ್ತಲೂ ಮೋಸದ ಬಲೆ ಬೀಸಿಕೊಂಡು ಕುಳಿತಿದ್ದಾರೆ! ವ್ಯಾಪಾರಿಗೆ ಯಾತ್ರಿಕನಾದರೇನು, ಸ್ವಜನವಾದರೇನು ? ಯಾರಾದರೇನು ? ಅವನ ಕಣ್ಣು ಲಾಭದ ಮೇಲೆ, 'ವ್ಯಾಪಾರಂ

ದ್ರೋಹ ಚಿಂತನಂ.'

"ಒಂದು ಕೆಲಸ ಮಾಡಪ್ಪ. ನಮ್ಮ ದೇವರಿಗೆ ತೆಂಗಿನಕಾಯಿ ಬೇಡ. ಒಂದು ಚಿಪ್ಪು ಬಾಳೆಹಣ್ಣು, ಒಂದಾಣೆ ಕರ್ಪೂರ, ಆರು ಕಾಸಿನ ಕುಂಕುಮ, ಆರು ಕಾಸಿನ ಅರಿಶಿನದ ಪುಡಿ ಹಾಕಪ್ಪ" ಎಂದು ನಾನು ಹೇಳುತ್ತಲೆ, ವ್ಯಾಪಾರಿ ಮುಖವನ್ನೆಲ್ಲ ಸಿಂಡರಿಸಿಕೊಂಡು ದುಗುಡದಿಂದ "ಹುಂ, ತಕೋ" ಎಂದು ಸಾಮಾನನ್ನೆಲ್ಲಾ ತಟ್ಟೆಗೆ ಹಾಕಿ "ನಾಲಣ ಕೊಡು" ಎಂದ. ನಾನು ನಾಲ್ಕಾಣೆ ಕೊಟ್ಟು ತಟ್ಟೆಯನ್ನು ತೆಗೆದುಕೊಂಡೆ. ಪೂಜೆಯಾದನಂತರ ತಟ್ಟೆ ಕೊಡುತ್ತೇನೆ ಎಂದು ಹೇಳಿದೆ. ಹೂವಾಡಗಿತ್ತಿ ಕೆನ್ನೆಯ ಮೇಲೆ ಬೆರಳಿಟ್ಟುಕೊಂಡು ನನ್ನನ್ನು ತಿಂದುಬಿಡುವಂತೆ ನೋಡುತ್ತಿದ್ದಳು.

"ಒಂದು ಆಣೆ ಕೊಡುತ್ತೇನೆ. ಹೂವಿನ ಸರ ಕೊಡುತ್ತೀಯಮ್ಮಾ?" ಎಂದೆ. ಒಂದು ಆಣೆ ಸುಲಭವಾಗಿ ಸಿಕ್ಕುತ್ತಿದ್ದುದು ಹೋಯಿತಲ್ಲಾ, ಎಂಬ ಭಾವವನ್ನು ತನ್ನ ನೋಟದಿಂದ ಸೂಚಿಸುತ್ತ,

"ಎಂದ ಊರು ಅಯ್ಯಾವರು ?"—ಎಂದಳು.

"ಯಾವ ಊರಾದರೂ ಆಗಲಿ, ಹೂವು ಕೊಡಮ್ಮ" ಎಂದು ಈಸಿಕೊಂಡು ದೇವಸ್ಥಾನಕ್ಕೆ ಹೊರಟೆವು. ಅಲ್ಲಿ ಕಾದಿದ್ದ ಒಬ್ಬ ಮನುಷ್ಯ "ನಾನು ಕರೆದುಕೊಂಡು ಹೋಗ್ತೀನಿ. ತಟ್ಟೆ ಕೊಡಿ, ಸಾಮಿ" ಎಂದ. ಅವನ ಬಟ್ಟೆಗೆ ಯಾವಾಗ ನೀರು ಸೋಕಿತ್ತೋ ದೇವರೇ ಬಲ್ಲ. ದೇಹದ ಮೇಲಿದ್ದ ಕೊಳಕೇನೂ ಕಾಣುವ ಹಾಗಿರಲಿಲ್ಲ. ಯಾಕೆಂದರೆ ಆ ಕಡೆ ಜನರೆಲ್ಲ ಸಾಮಾನ್ಯವಾಗಿ ನೀಲಮೇಘಶ್ಯಾಮರು.

"ನೀನು ಬೇಡ, ಹೋಗಪ್ಪ" ಎಂದೆ. ಆತ ದೈನ್ಯದಿಂದ ಬೇಡಿಕೊಂಡ.

"ತಮ್ಮಂತವರಿಂದ ಜೀವನ ಸಾಮಿ, ಈ ಹೊಟ್ಟೆಗೆ" ಎಂದು ಬೆನ್ನು ಹತ್ತಿದ ತನ್ನ ಹೊಟ್ಟೆಯನ್ನು ತೋರಿಸಿದ. ಬೆನ್ನು ಹತ್ತಿದ್ದ ಅವನ ಹೊಟ್ಟೆ ನನ್ನಲ್ಲಿ ಕನಿಕರವನ್ನುಂಟುಮಾಡಿತು.

"ಹೋಗಲಿ, ನಮ್ಮ ಜೊತೆಯಲ್ಲಿ ಬಾರಪ್ಪ ; ತಟ್ಟೆಯನ್ನು ನಾವೇ ತೆಗೆದು ಕೊಳ್ಳುತ್ತೇವೆ" ಎಂದೆ. ಮಡಿಮಾಡಿದ್ದ ಬಟ್ಟೆ ಹಾಕಿದ್ದ ಆ ವ್ಯಾಪಾರಿ ಏನು ಸಭ್ಯನೆ? ಕರುಣೆಯೆ? ಒಳಗಿನ ಅಂತರ್ಯ ಶುಚಿಯಾಗಿರಬೇಕು ಮನುಷ್ಯನಿಗೆ. ಹೊರಗಿನ ಆಡಂಬರ, ಬೆಡಗು ಮುಖ್ಯವಲ್ಲ.

ಬಾಹ್ಯಾಡಂಬರಗಳು ಆತ್ಮೋನ್ನತಿಯ ಸಾಧನೆಯ ಮಾರ್ಗದ ಸುಳಿವೇ ಗೋಚರಿಸದಂತೆ ಮಾನವನನ್ನು ತನ್ನ ಹಿಡಿತದಲ್ಲಿಟ್ಟಿರುವ ಶತ್ರುಗಳು.

ನಾವೆಲ್ಲರೂ ದೇವಸ್ಥಾನಕ್ಕೆ ಹೋದೆವು. ಗೋಪುರದ ಮೇಲೆಯೂ ಪ್ರಾಕಾರದ ಗೋಡೆಯ ಮೇಲೆಯೂ ಪಕ್ಷಿರಾಜನ ವಿಗ್ರಹಗಳಿದ್ದುವು. ಆ ವಿಗ್ರಹಗಳು ಯಾತ್ರಿಕರ ದೃಷ್ಟಿಯನ್ನು ಮೊದಲು ಸೆಳೆಯುತ್ತವೆ. ಎತ್ತರವಾದ ಪ್ರಾಕಾರದ ಗೋಡೆಯ ಮೇಲೆ ನಾಲ್ಕು ದಿಕ್ಕುಗಳನ್ನೂ ಗಂಭೀರ ಭಾವದಿಂದ ದಿಟ್ಟಿಸಿ ನೋಡುತ್ತಾ ಕುಳಿತಿವೆ-ಆ ವಿಗ್ರಹಗಳು. ಅನೇಕ ಜನ ಯಾತ್ರಿಕರು ಆಗಲೆ ಹೋಗಿ ಕೈಸಾಲೆಯ ಒಳಗಡೆ ಕುಳಿತಿದ್ದರು. ಇನ್ನೂ ಬಾಗಿಲು ತೆರೆದಿರಲಿಲ್ಲ. ವಿಶಾಲವಾದ ಕೈಸಾಲೆ. ಒಳಗಡೆ ದೊಡ್ಡ ಅಂಗಳ. ಅಂಗಳದ ಮಧ್ಯೆ, ಗರ್ಭಾಂಕಣದ ಎದುರು ಮೂವತ್ತು ಅಡಿ ಎತ್ತರದ ಹಿತ್ತಾಳೆಯ ಗರಡುಗಂಬ. ಗರ್ಭಾಂಕಣದ ಎರಡು ಪಕ್ಕಗಳಲ್ಲೂ ದೇವ ದೇವಿಯರ ಕಂಚಿನ ವಿಗ್ರಹಗಳು. ಶಿಲ್ಪಕಲಾಚಾತುರ್ಯ ನವೀನವಾಗಿತ್ತು. ಆರು ಘಂಟೆಮೇಲಾದರೂ ಬಾಗಿಲು ತೆಗೆಯಲೇ ಇಲ್ಲ. ಕೆಲವು ಹೆಂಗಸರು ಪೂಜಾರಿಗಳನ್ನು ಶಪಿಸುತ್ತಿದ್ದರು— "ಇವರಿಗೇನು ಬಂತು ಈ ಹೊತ್ತು! ಹಾಗೆ ಹೀಗೆ" ಅಂತ. ಹೆಂಗಸರ ಸ್ವಭಾವವೇ ಹಾಗೆ. ಅವರ ಮನಸ್ಸು ಚಂಚಲ.

ರಂಗಸ್ವಾಮಿ ಒಂದು ಬಾಳೆ ಹಣ್ಣನ್ನು ಜೇಬಿನಲ್ಲಿಟ್ಟುಕೊಂಡು ಮನಸ್ಸನ್ನು ಅದರ ಮೇಲಿಟ್ಟಿದ್ದ. ಪಾಪ, ಮೊದಲೇ ತಿಂದುಬಿಡುತ್ತಿದ್ದ. ಪೂಜೆಯಾದ ಮೇಲೆ ತಿನ್ನುವಂತೆ ನಾನು ಹೇಳಿದ್ದೆ. ಆದ್ದರಿಂದ ಅದರ ಕಡೆ ಗಮನವಿಲ್ಲದೆ, ಕೈಸಾಲೆಯ ಸುತ್ತಲೂ ಕೊಬ್ಬಿ ಕುಣಿಯುತ್ತಿದ್ದ ಕೋತಿಗಳ ತಂಡದ ಕಡೆ ನೋಡುತ್ತಾ ಮೈಮರೆತು ನನ್ನ ಪಕದ್ಕಲ್ಲೇ ನಿಂತಿದ್ದ. ಅದಾವ ಮಾಯದಲ್ಲಿ ಬಂದಿತೋ ಒಂದು ಮುದಿ ಗಡವ! ಕೋತಿ ಚಂಗನೆ ಹಾರಿತು ರಂಗಸ್ವಾಮಿಯ ಹೆಗಲ ಮೇಲಕ್ಕೆ. ಹುಡುಗ ಕಿಟ್ಟೋ ಎಂದು ಕಿರಿಚಕೊಂಡ. ನಾನು ತಿರುಗಿ ನೋಡುವಷ್ಟರಲ್ಲಿ ಕೋತಿ ಅವನ ಜೇಬಿನಿಂದ ಬಾಳೆಹಣ್ಣನ್ನು ಎಳೆದುಕೊಂಡು, ಬಾಯಿಗೆ ತುರುಕಿಕೊಳ್ಳುತ್ತಾ ಕೆಳಕ್ಕೆ ಹಾರಿತು. ಕೈಸಾಲೆಯಲ್ಲಿ ತುಂಬಿದ್ದ ಜನರೆಲ್ಲ "ಲೇ, ಲೇ, ಛೂ, ಹೊಡಿ" ಎಂದು ಗದರಿಸಿದರು. ನಾನು ಕೋತಿಯನ್ನು ಕೈಬೀಸಿ ಹೊಡೆಯುವವನಂತೆ ನಟಿಸಿದೆ. ಆ ಗಡವ ನನ್ನ ಬರಿ ಕೈಯನ್ನು ನೋಡಿ ಜಗ್ಗಲಿಲ್ಲ. 'ಘೊರ್' ಎಂದು ನನ್ನನ್ನೇ ಬೆದರಿಸುತ್ತಾ ಸರಸರನೆ ಪ್ರಾಕಾರದ ಗೋಡೆ

ಯನ್ನೇರಿತು. ರಂಗಸ್ವಾಮಿ ಹೆದರಿ ಬೆವರುತ್ತಿದ್ದ. ಅವನನ್ನು ಸಮಾಧಾನ ಪಡಿಸುವುದೇ ನನಗೂ ಮತ್ತು ಲಕ್ಷ್ಮಿಗೂ ಒಂದು ದೊಡ್ಡ ಶ್ರಮವಾಯಿತು. ಇದೆಲ್ಲವೂ ಕ್ಷಣಕಾಲದಲ್ಲಿ ನಡೆದು ಹೋಯಿತು. ಅನಂತರ ಜನರು ತಮ್ಮ ತಮ್ಮ ಚೀಲಗಳಲ್ಲಿ ತಂದಿದ್ದ ಹಣ್ಣು, ಕಾಯಿ, ತಿಂಡಿ ಪದಾರ್ಥಗಳನ್ನು ಭದ್ರ ಪಡಿಸಿಕೊಂಡರು.

ಆರುವರೆ ಘಂಟೆಯ ಹೊತ್ತಿಗೆ ಪೂಜಾರಿಗಳು ಜರತಾರಿ ಪಂಚೆ ಧೋತ್ರ ಹಾಕಿಕೊಂಡು ಮೆಲ್ಲನೆ ದೇವಸ್ಥಾನಕ್ಕೆ ಇಳಿದರು. ತಕ್ಷಣವೆ ಗರ್ಭಾಂಕಣದ ಬಾಗಿಲನ್ನು ತೆರೆದರು. ಗರ್ಭಾಂಕಣದ ಹೊಸಲಿನ ಹೊರ ಭಾಗದಲ್ಲಿ ಐದೂವರೆ ಅಡಿ ಎತ್ತರದ, ತಾಮ್ರದಿಂದ ಮಾಡಿದ, ಶ್ರೀ ವೆಂಕಟೇಶನ ವಿಗ್ರಹವಿದೆ. ಬಿಳಿಯ ನಾಮದಿಂದ ಹಣೆ, ಕಣ್ಣುಗಳು ಸಂಪೂರ್ಣವಾಗಿ ಮುಚ್ಚಲ್ಪಟ್ಟಿದ್ದವು. ಹಿತ್ತಾಳೆಯಿಂದ ಮಾಡಿದ ಕಿರೀಟ ವೊಂದು ತಲೆಯ ಮೇಲೆ ರಂಜಿಸುತ್ತಿತ್ತು. ನಾವೆಲ್ಲರೂ ಸಾಲುಸಾಲಾಗಿ ನಿಂತು ಒಬ್ಬರ ಹಿಂದೊಬ್ಬರು ಗರ್ಭಾಂಕಣದ ಒಳಗಡೆ ಹೋಗಿ, ಆರತಿಯ ಬೆಳಕಿನಲ್ಲಿ ಶ್ರೀನಿವಾಸನ ಪಕ್ಕದಲ್ಲಿ ಕುಳಿತಿದ್ದ ಅಲಮೇಲಮ್ಮನವರ ದರ್ಶನ ವನ್ನು ಪಡೆದೆವು. ಬಾಗಿಲಲ್ಲಿ ನಿಂತಿದ್ದ ಜವಾನರು "ಆರತಿಗೆ ನಿಮ್ಮ ಭಕ್ತಿ ಹಾಕಿ, ಸಾಮಿ" ಎಂದು ಯಾತ್ರಿಕರ ಕಿವಿಗೆ ಪಿಸುಗುಟ್ಟುತ್ತಲೇ ಇದ್ದರು. ಒಬ್ಬ ಜವಾನ ನನ್ನ ಕಿವಿಗೆ ಹೀಗೆ ಪಿಸುಗುಟ್ಟಿದಾಗ "ಭಕ್ತಿ ಹಾಕೋದಿಲ್ಲ ನಾನು; ಕಾಸು ಬೇಕಾದರೆ ಹಾಕ್ತೇನೆ" ಎಂದೆ. ಆತ ತಲೆ ಕೆರೆಯುತ್ತಾ ವ್ಯಂಗ್ಯವಾಗಿ ನಕ್ಕಾಗ ಅವನ ಮುಖದ ಮೇಲೆ ನಾಚಿಕೆ ನರ್ತನ ಮಾಡು ತ್ತಿತ್ತು. ದೇವಸ್ಥಾನದ ಹೊರಬಾಗಿಲಿನ ತನಕ ಯಾತ್ರಿಕರನ್ನು ಹಿಂಬಾಲಿಸಿ ಕಾಸನ್ನೊ, ಹಣ್ಣನ್ನೊ ಅಥವಾ ತೆಂಗಿನಕಾಯಿಯನ್ನೊ ಕಸಿದುಕೊಂಡೇ ಹೋಗುತ್ತಿದ್ದರು. ಏನನ್ನಾದರೂ ಕೊಡದೆ ಹೋದವರಿಗಂತೂ ದೇವರಿಗೆ ಬದಲಾಗಿ ತಾವೇ ವರ ಕೊಡುತ್ತಿದ್ದರು! ತಟ್ಟೆಯನ್ನು ಅಂಗಡಿಯವನಿಗೆ ಕೊಟ್ಟು, ಹಿಂಬಾಲಿಸಿದ್ದ ಬಡಪಾಯಿಯ ಕೈಗೆ ನಾಲ್ಕು ಆಣೆಯನ್ನಿಟ್ಟೆ. ಸ್ವರ್ಗವೇ ಅಂಗೈಮೇಲೆ ಬಿದ್ದಂತೆ ಆತ ಸಂತೋಷಪಟ್ಟ. ಹಣವಿಲ್ಲದ ಮನು ಷ್ಯನ ಬಾಳು ಎಣ್ಣೆಗೆ ಬಿದ್ದ ನೊಣದ ಹಾಗೆ! ಬಂಧುಗಳೂ ಸ್ನೇಹಿತರೂ ಹಣ ವಂತನನ್ನು ಆಶ್ರಯಿಸುವರು. ಹಣವಂತನನ್ನು ಸಮಾಜವು ಬಹಳ ಆದರ ಗೌರವದಿಂದ ಕಾಣುವುದು. ಅಳುತ್ತಿರುವ ಮಕ್ಕಳು ಕೂಡ ಕೈಯಲ್ಲಿ ಕಾಸಿ ಟ್ಟರೆ ತೆಪ್ಪನಾಗುತ್ತವೆ! ದುಡ್ಡಿಲ್ಲದವನ ನಂಟತನವನ್ನೂ ಸ್ನೇಹವನ್ನೂ ಬೆಳೆ

ಸಲುಜನರು ಹಿಂಜರಿಯುವರು. ಪ್ರಪಂಚದ ಸುಖಕ್ಕೆಲ್ಲ ಹಣವೇ ಮುಖ್ಯವಾದದು. ಅದನ್ನು ಸಂಪಾದಿಸುವುದೂ ಕಷ್ಟ, ಉಳಿಸಿಕೊಳ್ಳವುದೂ ಕಷ್ಟ. ನಾನಾ ದುರ್ಮಾರ್ಗಕ್ಕೆಳೆದು ಅದು ಜೀವನವನ್ನೇ ಹಾಳುಮಾಡುವುದೂ ಉಂಟು!

ಅವನ ಮುಖಮಂಡಲದಲ್ಲಿ ನಗೆಯು ಸುಳಿವೊಂದು ನಲಿದಾಡಿತು. ಎರಡು ಕೈಗಳನ್ನೂ ಎತ್ತಿ ಮೌನವಾಗಿ ವಂದಿಸಿದ ನನಗೆ. ಬಡವನಲ್ಲಿ ಎಂಥ ಸೌಜನ್ಯ ಗುಣವಿದೆ! ದಯೆ ದಾಕ್ಷಿಣ್ಯಗಳ ತೌರುಮನೆ ಬಡತನ. ತಕ್ಷಣವೇ ನಮ್ಮನ್ನು ಅನೇಕ ದರಿದ್ರ ನಾರಾಯಣರು ಮುತ್ತಿದರು. ಮಾರು ಮಾರುದ್ದ ಹರಿದಿದ್ದ ಹಣ್ಣರಿವೆ ಮೈಮೇಲೆ, ಸುಖವನ್ನೇ ಅರಿಯದ ದೈನ್ಯ ದೃಷ್ಟಿಯನ್ನು ಬೀರುತ್ತಿದ್ದ ಕಣ್ಣುಗಳು, ಅಸ್ಥಿಪಂಜರದ ಎಲುಬನ್ನೆಲ್ಲ ಸುಲಭವಾಗಿ ಎಣಿಸಬಹುದಾದ ಕರಿಯ ದೇಹಗಳು. ನನ್ನಲ್ಲಿದ್ದ ಚಿಲ್ಲರೆಯನ್ನು ಪ್ರತಿಯೊಬ್ಬರ ಕೈಗೂ ಹಾಕಿದೆ. ಮೃಷ್ಟಾನ್ನವನ್ನೇ ಉಂಡು, ಪೀತಾಂಬರವನ್ನೇ ಹೊದ್ದು, ಬೊಜ್ಜು ಬೆಳೆದ ದೇಹಗಳನ್ನು ತುಸು ಕರಗಿಸಲು ಇಷ್ಟಪಡದ ಸಿರಿವಂತರ ಬಾಳೂ, ನಿತ್ಯ ಜೀವನವನ್ನು ಸಾಗಿಸಲು ಹೊಟ್ಟೆ ಬಟ್ಟೆಗಿಲ್ಲದೆ ಕೃಶರಾಗಿ ಬಡತನದ ಮಾರಿಯ ಕರಾಳ ಹಿಡಿತಕ್ಕೆ ಸಿಕ್ಕಿ ದಹಿಸುತ್ತಿರುವ ಜೀವಿಗಳ ದೃಶ್ಯಗಳೂ, ಒಂದೊಂದಾಗಿ ನನ್ನ ದೃಷ್ಟಿಯ ಎದುರು ಸುಳಿದುವು. ಯಾವ ಪಾಪದ ಫಲವೊ ಇದು? ಎಂದುಕೊಂಡು ತಿರುಪತಿ ಛತ್ರದ ಕಡೆಗೆ ಹಿಂದಿರುಗಿದೆವು.

ಸಾಯಂಕಾಲ ಏಳು ಘಂಟೆಗೆ, ನಾವು ಹೋಗಿದ್ದ ಬಡಕಲು ಕುದುರೆಯ ಗಾಡಿಯಲ್ಲಿ, ವೆಂಕಟೇಶ ಛತ್ರವನ್ನು ಸೇರಿದೆವು. ಹೇಳತೀರದ ಸೆಕೆ. ನನಗಂತೂ ಜ್ವರದ ನಂಜಿನ ಜತೆಗೆ ಬೇಗೆಯ ತಾಪ ಬೆರತು ದೇಹ ಬಳಲಿ ಬೆಂಡಾಯಿತು. ಬದ್ಧಿಯು ಚಂಚಲಾವಸ್ಥೆಯಲ್ಲಿತ್ತು. ರೋಗಿಗೂ ಬೆಳೆವ ಹೆಣ್ಣಿಗೂ ಮಕ್ಕಳಿಗೂ ಬುದ್ಧಿ ಚಂಚಲಾ ವಸ್ಥೆಯಲ್ಲಿರುತ್ತದೆ. ನಾಳೆ ತಿರುಮಲೆ ಬೆಟ್ಟದ ಮೇಲಕ್ಕೆ ಹೋಗುವುದೇ ಅಥವಾ ಕಾಲುಗಳನ್ನು ಊರ ಕಡೆ ತಿರುಗಿಸುವುದೇ ಎಂದು ಯೋಚಿಸಿದೆ. ಆ ರಾತ್ರಿ ಒಬೆ ಬೆಂಕಿಯನ್ನೇ ಕಾಣಲಿಲ್ಲ. ಆದರೆ ಹುಡುಗರ ಹೊಟ್ಟೆ ಬೇರೆಯವರ ಕಷ್ಟ ಕೇಳುತ್ತದೆಯೆ? ರಂಗಸ್ವಾಮಿ ಕಡಲೆಪುರಿ, ಬಾಳೆಹಣ್ಣು ತಿಂದು ಹೊಟ್ಟೆ ಭರ್ತಿಮಾಡಿಕೊಂಡ. ಲಕ್ಷ್ಮಿಯ ಮನಸ್ಸು ಚಿಂತೆಯ ಮುತ್ತಿಗೆಗೆ ತುತ್ತಾಯಿತು. “ನಾಳೆ ಬೆಟ್ಟಕ್ಕೆ ಹೋಗಬೇಕು; ತೀರ್ಥಗಳಿಗೆ ಅಲ್ಲಿಂದ ಕಾಡಿನಲ್ಲಿ ನಡೆಯಬೇಕು; ಏನು

ಗ್ರಹಚಾರ. ನಾವು ದೇವರ ಯಾತ್ರೆಗೆ ಬಂದರೆ ಹೀಗಾಯಿತಲ್ಲ!" ಎಂದು ನಿಟ್ಟುಸಿರುಬಿಟ್ಟಳು. ಮನದಲ್ಲೇ ದೇವರಿಗೆ ನಮಿಸಿ ಮಲಗಿಕೊಂಡಳು. ರಂಗಸ್ವಾಮಿ ನೆಲಕ್ಕೆ ತಲೆ ಕೊಟ್ಟನೋ ಇಲ್ಲವೋ, ನಿದ್ರಾದೇವಿ ಅವನನ್ನು ತನ್ನ ಮಡಿಲಿಗೆ ಹಾಕಿಕೊಂಡಳು. ರಾತ್ರಿ ಒಂದು ಘಂಟೆಯ ತನಕ ನಾನು ಎಷ್ಟು ಬೇಡಿಕೊಂಡರೂ ಆಕೆ ನನ್ನನು ಮುಟ್ಟಲಿಲ್ಲ. ಯಾವಾಗ ಆ ದೇವಿ ತನ್ನ ಕೃಪೆಯನ್ನು ನನ್ನ ಮೇಲೆ ಬೀರಿದಳೋ ನನಗೇ ಅರಿವಿಲ್ಲ. ನನಗೆ ಎಚ್ಚರವಾದಾಗ ಪಕ್ಷಿಗಳು ಚಿಲಿಪಿಲಿಗುಟ್ಟುತ್ತಿದ್ದುವು. ಸಂಪೂರ್ಣವಾಗಿ ಬೆಳಗಾಗಿತ್ತು. ತಂಗಾಳಿ ಮೃದುವಾಗಿ ಬೀಸುತ್ತಿತ್ತು. ನನ್ನ ಮೈ ಹೂವಿನಂತೆ ಹಗುರವಾಗಿತ್ತು. ಮನಸ್ಸು ಉಲ್ಲಾಸಗೊಂಡಿತು. ದೇವರು ಎಂಥ ಜಗನ್ನಾಟಕ ಸೂತ್ರಧಾರಿ! ಎಂತಹ ಭಕ್ತ ವತ್ಸಲ! ಎಂದುಕೊಂಡೆ. ಅಷ್ಟರಲ್ಲೇ ಯಾತ್ರಿಕರು ತಮ್ಮ ತಮ್ಮ ಗಂಟು ಮೂಟೆಗಳನ್ನು ಹಿಡಿದುಕೊಂಡು ಬೆಟ್ಟದ ಮೇಲಕ್ಕೆ ಹೋಗಲು ಹವಣಿಸುತ್ತಿದ್ದರು. ಕೆಲವರು ಕಾಲು ನಡಗೆಯಲ್ಲಿ, ಕೆಲವರು ಮೋಟಾರನ್ನು ಹತ್ತಿ ಹೋಗುತ್ತಿದ್ದರು. ನಾಲ್ಕೈದು ಮೋಟಾರುಗಳು ದೇವಸ್ಥಾನದ ಇಲಾಖೆಗೆ ಸಂಬಂಧಪಟ್ಟವುಗಳು. ಮೋಟಾರಿಗೆ ಒಬ್ಬೊಬ್ಬರಿಗೆ ಒಂದೂವರೆ ರೂಪಾಯಿ ಚಾರ್ಜು. ನಡೆದುಕೊಂಡು ಬೆಟ್ಟವನ್ನೇರುವುದು ಸುಲಭವಲ್ಲ. ವಯಸ್ಸು ಮೀರಿದವರೂ ಮಕ್ಕಳೂ ಸುಖವಾಗಿ ಡೋಲಿಯಲ್ಲಿ ಕುಳಿತುಕೊಂಡು ಹೋಗಬಹುದು. ಡೋಲಿಯಲ್ಲಿ ಜನರನ್ನು ಕೂಡಿಸಿಕೊಂಡು ಬೆಟ್ಟವನ್ನು ಹತ್ತಲು ಅನೇಕ ಕೂಲಿ ಆಳುಗಳು ಬೆಟ್ಟದ ಬುಡದಲ್ಲೆ ಕಾದುನಿಂತಿದ್ದಾರೆ. ಬೆಟ್ಟದ ಹಾದಿಯ ಉದ್ದಕ್ಕೂ ಹಾಸಿರುವ ಕಲ್ಲುಗಳ ಮೇಲೆಲ್ಲ ಕೋಟ್ಯಾನುಕೋಟಿ ಜನರ ಹೆಸರುಗಳು ಕೆತ್ತಲ್ಪಟ್ಟಿವೆ. ಯಾತ್ರಿಕರು ತಾವು ತಿರುಪತಿಗೆ ಬಂದ ಜ್ಞಾಪಕಾರ್ಥವಾಗಿ ಹಾಗೆ ಕಲ್ಲುಗಳ ಮೇಲೆ ತಮ್ಮ ತಮ್ಮ ಹೆಸರುಗಳನ್ನು ಕೆತ್ತಿಸುತ್ತಾರೆ.

ನಾವು ಮೂವರೂ ಮೋಟಾರಿನಲ್ಲಿ ಕುಳಿತು ಹೊರಟೆವು. ಉಷಃಕಾಲ. ತಂಗಾಳಿ ಮರಗಿಡಗಳನ್ನು ಮುತ್ತಿಡುತ್ತಾ ಗಂಭೀರವಾಗಿ ಬೀಸುತಿತ್ತು. ಕಾಡಿನ ಹೂವುಗಳ ಕಂಪು ತಂಗಾಳಿಯಲ್ಲಿ ಅಲೆ ಅಲೆಯಾಗಿ ತೇಲಿಬರುತ್ತಿತ್ತು. ಹಕ್ಕಿ ಪಕ್ಷಿಗಳು ರೆಕ್ಕೆ ಪುಕ್ಕಗಳನ್ನು ಒದರಿಕೊಂಡು, ಉಷಃಕನ್ಯೆಯನ್ನು ಸ್ವಾಗತಿಸಲೆಂಬಂತೆ ಕಿಲಕಿಲ ನಾದದಿಂದ ಮರದಿಂದ ಮರಕ್ಕೆ ಹಾರಾಡುತ್ತಿದ್ದವು. ಜಗವು ಜಡತ್ವವನ್ನು ಕೊಡಹಿ ಚೇತನಗೊಂಡತೆ ಭಾಸವಾಗುತ್ತಿತ್ತು. ಎತ್ತನೋಡಿದರೂ ಅತೀವ ಗಂಭೀರ ಮೌನ ಆವರಿಸಿದ

ಬ್ರಹ್ಮಾಂಡವೇ. ಪೂರ್ವದಿಗಂತದಂಚಿನಲ್ಲಿ ಚಿನ್ನದ ರೇಖೆಯಂತಿದ್ದರಾಗ ನಸುಗೆಂಪಾಗಿ ಮತ್ತೊಂದು ಕ್ಷಣದಲ್ಲಿಯೇ ಕಡುಗೆಂಪಾಯಿತು; ಕೊನೆಗೆ ಕುಂಕುಮ ಸುರಿದಂತಾಗಿ ಹೊನ್ನಿನ ಉರಿಯಾಗತೊಡಗಿತು. ನಂತರ ಜ್ವಾಲೆ ಕ್ಷಣಕ್ಷಣಕ್ಕೂ ಪಸರಿಸತೊಡಗಿತು. ಆ ಜ್ವಾಲೆಯ ಹಿಂಬದಿಯಲ್ಲಿ ನಿಮಿಷಾರ್ಧದಲ್ಲಿ ಉದಯರವಿ ಕಾಣಿಸಿಕೊಂಡನು. ದೂರದಲ್ಲಿ ಮಸುಮಸುಕಾಗಿ ಕಾಣುತ್ತಿದ್ದ ಬೆಟ್ಟಗುಡ್ಡಗಳೂ, ಮರಗಿಡಗಳೂ ಸೂರ್ಯನ ಹೊಂಬಣ್ಣದ ಕಿರಣಗಳ ಕಾಂತಿಯ ಪ್ರವಾಹದಲ್ಲಿ ಮಿಂದು ಸ್ಪಷ್ಟವಾಗಿ ಗೋಚರಿಸತೊಡಗಿದವು. ತಾಮ್ರದ ಕೋಟೆಯಂತಿದ್ದ ಆ ಗಿರಿಯ ತುತ್ತತುದಿಯ ಮೇಲೆ ಬಾಲಸೂರ್ಯನ ಕಿರಣಗಳು ಬಿದ್ದು ಇಡೀ ಬೆಟ್ಟವೆಲ್ಲ ಚಿನ್ನದ ಗಿರಿಯಂತೆ ಮಿರುಗುತ್ತಿತ್ತು. ಆಗ ನನಗೆ ನೆನಪಾಯಿತು: ಜನರು ವೆಂಕಟೇಶನನ್ನು ಸ್ತೋತ್ರಮಾಡುವಾಗ 'ಚಿನ್ನದ ಗಿರಿವಾಸ, ಬಂಗಾರ ಗಿರಿಯವನೆ, ಚಿನ್ನದ ಚಾವಡಿಯವನೆ' ಎನ್ನುವುದು ಇದರಿಂದ ಎಂದು. ಗಾಳಿ, ಮಳೆ ಎಂಬ ಆಯುಧಗಳಿಂದ ಮಲೆಯನ್ನು ಕೋಟೆಯಂತೆ ಕೆತ್ತಿ ತಾಮ್ರವರ್ಣವನ್ನು ಲೇಪಿಸಿದ ವಿಶ್ವಶಿಲ್ಪಿಯ ಚಾತುರ್ಯವನ್ನು ಕಂಡು ಆನಂದದ ಹೊನಲಲ್ಲಿ ನನ್ನ ಮನಸ್ಸು ಕೊಚ್ಚಿಹೋಯಿತು. ರಂಗಸ್ವಾಮಿ "ಯಾರಪ್ಪ ಬೆಟ್ಟದ ತುದಿಯಲ್ಲಿ ಸುತ್ತಲೂ ತಾಮ್ರದ ಗೋಡೆ ಹಾಕಿರುವವರು?" ಎಂದು ಕೇಳುತ್ತಿದ್ದ. ನಾನು "ಅದೆಲ್ಲವೂ ದೇವರ ಸೃಷ್ಟಿ" ಎಂದು ಹೇಳಿದೆ.

"ದೇವರು ಹೇಗೆ ಕೆತ್ತಿದ?" ಎಂದ.

"ಸುಮ್ಮನೆ ತಿಳಿದುಕೊಳ್ಳೊ. ಹೇಗೆ ಎಂಡರೆ ಯಾರಿಗೆ ಗೊತ್ತು" ಎಂದು ರೇಗಿ, ಅವನ ಬಾಯಿ ಮುಚ್ಚಿಸಿದೆ. ಹಾಗಲ್ಲದಿದ್ದರೆ ಉತ್ತರವನ್ನೆಲ್ಲಿಂದ ತರಲಿ ಅಂಥ ಪ್ರಶ್ನೆಗೆ? ಮೋಟಾರು ಸುರುಳಿ ಸುತ್ತಿಕೊಂಡು ಆ ರಮ್ಯ ವನರಾಜಿಯ ಗರ್ಭದಲ್ಲಿ ಒಮ್ಮೆ ಏರುತ್ತಾ ಒಮ್ಮೆ ಇಳಿಯುತ್ತಾ ಇಕ್ಕಟ್ಟಾದ ಹಾದಿಯಲ್ಲಿ ಹೊರಟಿತು. ದಾರಿಯ ಪಕ್ಕದಲ್ಲೇ ಕಾಣುವ ಕಡಿದಾದ ಕಂದರವನ್ನು ನೋಡಿದಾಗ ನನ್ನಲ್ಲಿ ಭಯ ತಲೆ ಹಾಕುತ್ತಿತ್ತು. ಡ್ರೈವರನು ಎಡದ ಕೈಯಲ್ಲಿ 'ಸ್ಟೇರ್'ನ್ನು ಹಿಡಿದು ಬಲಗೈಯಲ್ಲಿ ಸಿಗರೇಟನ್ನು ಸೇದುತ್ತಾ ತನ್ನ ಮಿತ್ರರ ಸಂಗಡ ಸಂಸಾರದ ಕಷ್ಟನಿಷ್ಠುರಗಳನ್ನು ತೋಡಿಕೊಳ್ಳುತ್ತಾ, ಕೇವಲ ಉದಾಸೀನದಿಂದ ಗಾಡಿಯನ್ನು ನಡೆಸುತ್ತಿದ್ದ ವರ್ತನೆ ನನ್ನ ಭಯವನ್ನು ಹೆಚ್ಚಿಸುತ್ತಿತ್ತು. ಅವನಿಗೆ ಅಭ್ಯಾಸದ ಧೈರ್ಯವಿರಬೇಕು. ಆದರೆ ಪ್ರಯಾಣಿಕರಾದ ನಮಗೆ ಡ್ರೈವರನ ಅಲಕ್ಷ್ಯವು—

ಮೃತ್ಯು ಹೊಂಚು ಹಾಕುತ್ತಿದ್ದ ಕಣಿವೆಗಳನ್ನು ಕಣ್ಣಿಗೆ ಕಟ್ಟುತ್ತಿತ್ತು. ನಮ್ಮ ಪಕ್ಕದಲ್ಲಿ ಕುಳಿತಿದ್ದ ಕೆಲವು ಪ್ರಯಾಣಿಕರ ಮುಖದಲ್ಲಿ ಭಯ ನರ್ತನಗೈಯುತ್ತಿತ್ತು. ಮೋಟಾರು ಒಂದು ತಿರುವಿನಲ್ಲಿ ಗಿರ‍್ರನೆ ತಿರುಗಿದಾಗ, ನಮ್ಮ ಪಕ್ಕದ ಸೀಟಿನಲ್ಲಿ ಎರಡು ತಿಂಗಳ ಹಸುಳೆಯೊಂದನ್ನು ತನ್ನ ಮಡಿಲಲ್ಲಿ ಮುದುರಿಕೊಂಡು ಕುಳಿತಿದ್ದ ತಾಯಿಯೊಬ್ಬಳು ಇನ್ನೇನು ಮಗುವನ್ನು ತನ್ನ ಹಿಡಿತದಿಂದ ಗಾಡಿಯೊಳಕ್ಕೆ ಬಿಸಾಡುವುದರಲ್ಲಿದ್ದಳು. ಆಗ ಆಕೆ ಚೀರಿಕೊಂಡಳು. ಮಾತೃಪ್ರೇಮ! ತನ್ನ ಜೀವಕ್ಕಿಂತಲೂ ಹೆಚ್ಚಾದ ಹಸುಳೆಯನ್ನು ಮುಗ್ಗರಿಸಿ ಬಿಗಿಯಾಗಿ ಹಿಡಿದಾಗ ಕಂಪನಗೊಂಡ ಆಕೆಯ ಶರೀರದಲ್ಲಿ ಬೆವರು ಸುರಿಯತೊಡಗಿತು. ಆ ಮಗು ಪ್ರೇಮದ ಮುದ್ದೆಯಾಗಿ ಅಚೇತನವಾಗಿದ್ದಂತೆ ಭಾಸವಾಯಿತು ನನಗೆ.

"ಛೇ, ಏಕೆ ಇಂಥ ಹಸುಗೂಸುಗಳನ್ನು ತರುತ್ತೀರಿ?" ಎಂದೆ ನಾನು. ತನ್ನ ಕೂಸಿಗೂ ಭಗವಂತನ ಪಾದಾರವಿಂದದ ದರ್ಶನವಾಗಲಿ, ಅದರ ಭವಿಷ್ಯ ಜೀವನದ ಹಾದಿ ಸುಖಮಯವಾಗಿರಲಿ, ಎಂಬುದೇ ಆಸೆ ಎನ್ನುವಂತೆ ಆಕೆ ನನ್ನ ಕಡೆ ತನ್ನ ದೈನ್ಯದೃಷ್ಟಿಯನ್ನು ಬೀರಿದಳು. ಏನೋ, ಇದೆಲ್ಲವೂ ಭಗವಂತನ ಲೀಲೆ. ನಾವು ಅವನ ಸೂತ್ರದ ಗೊಂಬೆಗಳು ಎಂದುಕೊಂಡು ತೆಪ್ಪನಾದೆ. ಮೋಟಾರು ಚಕ್ರ ತನ್ನ ದಾರಿಯನ್ನು ಬಿಟ್ಟು ಒಂದು ಮೊಳ ಎಡಕ್ಕೋ ಅಥವಾ ಬಲಕ್ಕೋ ಉರುಳಿತೆಂದರೆ ತೀರಿತು, ಆ ಕಡಿದಾದ ಕಣಿವೆಗಳಲ್ಲಿ ಹೊಂಚು ಹಾಕುತ್ತಿರುವ ಮೃತ್ಯುವಿನ ಬಾಯಲ್ಲಿ ಪ್ರಯಾಣಿಕರೆಲ್ಲರೂ ಒಂದೇ ತುತ್ತಾಗಬೇಕು. ಜೀವವನ್ನು ಕೈಲಿ ಹಿಡಿದು, ಪ್ರಯಾಣವನ್ನು ಮುಗಿಸಿ ನಾವೆಲ್ಲರೂ ಸುಮಾರು ಎಂಟು ಘಂಟೆಗೆ ಮಲೆಯ ಮೇಲಿರುವ ಶ್ರೀ ವೆಂಕಟಾಚಲಸ್ವಾಮಿಯ ದೇವಸ್ಥಾನವನ್ನು ತಲಪಿದೆವು. ಸುತ್ತಲೂ ನಿಸರ್ಗದ ಬೆಡಗು ಚೆಲ್ಲಾಡುತ್ತಿತ್ತು.

ದೇವಸ್ಥಾನದ ಪಕ್ಕದಲ್ಲೇ ಇರುವ ಛತ್ರಕ್ಕೆ ಹೋದೆವು. ಛತ್ರದ ಅಧಿಕಾರಿಗಳಿಂದ ನಾನು ಒಂದು ಕೊಠಡಿಯನ್ನು ತೆಗೆದುಕೊಂಡೆ. ನಮ್ಮ ಸಾಮಾನುಗಳನ್ನೆಲ್ಲ ಅಲ್ಲಿರಿಸಿ ಕೊಠಡಿಗೆ ಬೀಗ ಹಾಕಿಕೊಂಡೆವು.

# ೩. ಪಾಪನಾಶನ ತೀರ್ಥ

ಸಾಮಾನುಗಳನ್ನು ಕೊಠಡಿಯಲ್ಲಿ ಭದ್ರವಾಗಿ ಇರಿಸಿದವರೇ, ನಾವು ಪಾಪನಾಶನ ತೀರ್ಥಕ್ಕೆ ಹೊರಟೆವು. ಅಲ್ಲಿಗೆ ಹೋಗುತ್ತಿದ್ದ ಕೆಲವರನ್ನು ವಿಚಾರಿಸಿದೆ; ದೂರ ಎಷ್ಟಿದೆ? ಎಂದು. "ಮೂರು ಮೈಲಿ ಇದೆ" ಎಂದರು. ನನಗೆ ದೇಹದಲ್ಲಿ ಸ್ವಲ್ಪ ಚೈತನ್ಯ ಬಂದಂತೆ ಇತ್ತು. ಆದರೂ ಮನಸ್ಸಿನ ಹುಮ್ಮಸ್ಸಿಗೆ ದೇಹದ ಶಕ್ತಿ ಎಣೆಯಾಗಿರಲಿಲ್ಲ. ರಂಗಸ್ವಾಮಿಯ ಕಡೆ ನನ್ನ ಕಣ್ಣುಗಳು ಹೊರಳಿದುವು.

"ಲೋ, ಮೂರು ಮೈಲಿ ಕಾಡಿನಲ್ಲಿ ಹೋಗಬೇಕು; ಮೂರು ಮೈಲಿ ಆ ಕಡೆಯಿಂದ ಬರಬೇಕು. ನಡೆಯುತ್ತೀಯೇನೋ?" ಎಂದೆ.

"ಓ, ಓ! ಹಾರಿಹೋಗ್ತೇನೆ" ಎಂದ.

"ಹುಡುಗಾಟ ಅಂತ ತಿಳಿದಿದ್ದೀಯಾ? ಬೆಟ್ಟ ಹತ್ತಬೇಕು—ಬೆಟ್ಟ ಇಳಿಯಬೇಕು."

"ಬೇಕಾದ್ದಾಗಲಿ, ತೀರ್ಥ ಹೇಗಿದೆಯೋ ನೋಡೆ ಬಿಡ್ಬೇಕು, ಕಾಣಪ್ಪಾ."

"ಸರಿ ನಡೆಯಪ್ಪ. ಏನಾದರೂ ಕಾಲು ನೋಯುತ್ತೆ ಅಂದ್ರೆ ಸುಮ್ಮನೆ ಬಿಡುವುದಿಲ್ಲ."

ಮೂವರೂ ಹೊರಟೆವು. ದಾರಿ ದೇವಸ್ಥಾನದಿಂದ ಉತ್ತರ ದಿಕ್ಕಿಗೆ ಸರಿಯಿತು. ಒಂದು ಫರ್ಲಾಂಗು ದೂರ ಹೋಗುವಷ್ಟರಲ್ಲಿ ಭಿಕ್ಷುಕರ ತಂಡ ನಮ್ಮನ್ನು ಮುತ್ತಿತು. ಕಾಸು ಕೊಡದೆ ಅವರಿಂದ ಬಿಡಿಸಿಕೊಳ್ಳುವುದು ಬಹು ಕಷ್ಟವಾಯಿತು. ದಾರಿ ಸವೆದು ಬಹು ಸ್ಪಷ್ಟವಾಗಿ ಕಾಣುತ್ತಿತ್ತು. ಕಲ್ಲು ಗುಂಡುಗಳೇ ದಾರಿಯುದ್ದಕ್ಕೂ. ಅವುಗಳ ಮೇಲೆಲ್ಲಾ ಯಾತ್ರಿಕರು ತಮ್ಮ ತಮ್ಮ ಹೆಸರುಗಳನ್ನು ಕೆತ್ತಿಸಿದ್ದರು. ಸುಮಾರು ಎರಡು ಫರ್ಲಾಂಗು ದೂರ ಬೆಟ್ಟವನ್ನು ಏರುತ್ತ ಹೋದೆವು. ನಮ್ಮ ಮುಂದೂ ಹಿಂದೂ ಅನೇಕರು ತೀರ್ಥಸ್ನಾನಕ್ಕೆ ಹೋಗುತ್ತಲೂ ಬರುತ್ತಲೂ ಇದ್ದರು. ದಾರಿಯುದ್ದಕ್ಕೂ ಭಿಕ್ಷುಕರು ಕೈಯಲ್ಲಿ ಒಂದು ಹಳೆಯ ಬಟ್ಟಲನ್ನು ಹಿಡಿದುಕೊಂಡು ಕುರುಡರಂತೆಯೂ ಅಂಗಹೀನರಂತೆಯೂ ನಟಿಸುತ್ತ 'ಕಣ್ಣಿಲ್ಲ, ಕಾಸು ಕೊಡಿ, ತಂದೆ' ಎಂದು ಅರಚುತ್ತಿದ್ದರು. ಎಳೆ ಹಸುಳೆಗಳನ್ನು ನೆಲದ ಮೇಲೆ

ಚಿತ್ತಲೆ ಮಲಗಿಸಿಕೊಂಡು ಕೆಲವು ತಾಯಂದಿರು ಭಿಕ್ಷೆ ಯಾಚಿಸುವ ದೃಶ್ಯ ಯಾರ ಮನಸ್ಸನ್ನಾದರೂ ಕರಗಿಸದೆ ಬಿಡದು. ಹೃದಯ ನೀರಾಗುವುದು ಅವರನ್ನು ಕಂಡು! ಆ ಭಿಕಾರಿಗಳು ಮಲಿನತೆಯ ಮಡಿಲಲ್ಲಿ ಮಲಗಿದ್ದರು. ವೆಂಕಟೇಶನ ಸನ್ನಿಧಿಯಲ್ಲಿ ಹೊಟ್ಟೆಗೇನೂ ಯಾರಿಗೂ ಅಭಾವವಿಲ್ಲ. ದಾರಿಯಲ್ಲಿದ್ದ ಕೆಲವು ಮರಗಳ ಕೆಳಗೆ ಕೆಲವು ಭಿಕಾರಿಗಳು ಜಟಾಧಾರಿಗಳಾಗಿ ಮೈಗೆಲ್ಲಾ ಬೂದಿ ಬಳಿದುಕೊಂಡು, ಕೌಪೀನವನ್ನು ಕಟ್ಟಿಕೊಂಡು ಪದ್ಮಾಸನಾರೂಢರಾಗಿ, ತಪೋನಿಷ್ಠರಂತೆ ನಟಿಸುತ್ತ ಅರಿಯದ ಯಾತ್ರಿಕರ ಮನಸ್ಸನ್ನು ಲೂಟಿಮಾಡಿ ದುಡ್ಡು ಕಸಿಯುತ್ತಿದ್ದರು. ಇಂಥ ಕುಹಕ ತಪಸ್ವಿಗಳನ್ನು ಕಂಡು ನಾನು ವಿಸ್ಮಯ ಹೊಂದಿದೆ. ನನ್ನ ಕಣ್ಣುಗಳನ್ನು ನಾನೇ ನಂಬದೆ ಹೋದೆ. ಇಂಥ ತಪಸ್ವಿಯೊಬ್ಬನಿಗೆ ಒಂದು ಕಾಸನ್ನೂ ಹಾಕದೆ, ಅರೆ ನಿಮಿಷ ಅವನನ್ನೇ ದಿಟ್ಟಿಸಿ ನೋಡಿ ಮುಂದೆ ಹೊರಟೆ. ನಾಲ್ಕು ಹೆಜ್ಜೆ ಹೊರಟೆನೋ ಇಲ್ಲವೋ, ಆ ತಪಸ್ವಿ ಓರೆಗಣ್ಣಿನಿಂದ ನನ್ನನ್ನೇ ತಿಂದುಬಿಡುವಂತೆ ನೋಡುತ್ತಿದ್ದುದು ಅಕಸ್ಮಾತ್ತಾಗಿ ಹಿಂದಿರುಗಿ ನೋಡಿದ ನನ್ನ ದೃಷ್ಟಿಗೆ ಬಿತ್ತು. ಆಗಲೇ ತಪಸ್ವಿಯ ಗುಟ್ಟು ಸಂಪೂರ್ಣವಾಗಿ ರಟ್ಟಾದುದು. ಮರದ ಬುಡದಲ್ಲಿ ಕುಳಿತಿದ್ದ ಅಂಥ ತಪಸ್ವಿಯೊಬ್ಬನಿಗೆ ಲಕ್ಷ್ಮಿ ಕಾಸು ಹಾಕಲು ಹೋದಾಗ,

"ಋಷಿಗಳಿಗೇಕವ್ವ ಕಾಸು? ಬೇಡ, ಬಾ" ಎಂದ ರಂಗಸ್ವಾಮಿ.

"ಅದೂ ನ್ಯಾಯವೆ" ಎಂದೆ ನಾನು. ತಾಯಿಯ ಹಿಂದೆ "ಆ ಬೆಟ್ಟ ನೋಡವ್ವ, ಬಾನು ಮುತ್ತಿಡುತ್ತಿದೆ! ಈ ಬೆಟ್ಟ ನೋಡವ್ವ, ಎಲ್ಲಿ ತನಕ ಹಬ್ಬಿದೆ!"

ಎಂದು ಕೈಬೆರಳಿನಿಂದ ತೋರಿಸುತ್ತಲೇ ಇದ್ದ. ತನ್ನ ಕಣ್ಣಿಗೆ ಬೀಳುತ್ತಿದ್ದ ಕಾಮನಬಿಲ್ಲಿನ ಬಣ್ಣದ ಚಿಟ್ಟೆಗಳನ್ನು ಹಿಡಿಯುತ್ತ ದಾರಿಯನ್ನು ಸಾಗಿಸುತ್ತಿದ್ದ. ಬೆಟ್ಟ ಹತ್ತುವಾಗ ನನ್ನ ಕಾಲುಗಳ ಶಕ್ತಿ ಉಡುಗಿ ಹೋಗುತ್ತಿತ್ತು. ಸುತ್ತಲೂ ಹಬ್ಬಿದ ಪರ್ವತಶ್ರೇಣಿಗಳ ಮೇಲೆ ಹಾಸಿದಂತೆ ಕಾಣುತ್ತಿದ್ದ ಬಾನನ್ನು ನಟ್ಟ ದೃಷ್ಟಿಯಿಂದ ನೋಡಿದೆ. ಉಷಃಕಾಲದ ಸೂರ್ಯನ ಕಿರಣಗಳ ಕಾಂತಿಯ ಪ್ರವಾಹವು ವನಲತೆಗಳ ಮೇಲೆ ಹರಿದು, ಆ ಹಸುರು ಬಣ್ಣ ಅಪೂರ್ವ ಕಾಂತಿಯಿಂದ ಮಿರುಗುತ್ತಿತ್ತು. ಆ ವನದಸೌಂದರ್ಯರಾಶಿಯ ಸೊಬಗಿನ ಹೊನಲಿನಲ್ಲಿ ನನ್ನ ಮನಸ್ಸು, ಆತ್ಮ ಮಿಂದು ಮೈಮರೆತವು. ದಾರಿ ಕಡಿದಾಗಿ, ಬೆಟ್ಟ ಹತ್ತುವಾಗ ದೇಹದ ಶಕ್ತಿ ಉಡುಗಿದಂತಾಗು

ತ್ತಿತ್ತು. ಮನಸ್ಸಿನ ಶಕ್ತಿ ಮೈಯಲ್ಲಿರಲಿಲ್ಲ. ತೊಟ್ಟುಕೊಂಡಿದ್ದ ಕೋಟು ಭಾರವಾದಂತೆ ಕಂಡಿತು. ಅದನ್ನು ಕಳಚಿ ಚೀಲಕ್ಕೆ ಹಾಕಿದ್ದಾಯಿತು. ನನ್ನ ಕಾಲುಗಳ ಮೇಲೆ ಶರೀರ ಭಾರವು ಹೇರಿಕೊಂಡಂತೆ ಕಾಣುತ್ತಿತ್ತು. ಲಕ್ಷ್ಮಿಯೂ ರಂಗಸ್ವಾಮಿಯೂ ಒಂದಕ್ಕೊಂದು ಹೆಣೆದು ಹಬ್ಬಿರುವ ಬೆಟ್ಟದ ಸಾಲುಗಳನ್ನೂ, ಹೆಮ್ಮರಗಳ ರಾಶಿಯ ಸೌಂದರ್ಯವನ್ನೂ ಸವಿಯುತ್ತಾ ಬರುತ್ತಿದ್ದರು. ದಾರಿ ನನಗೆ ಕಂಡಷ್ಟು ಕಠಿಣವಾಗಿ ಅವರಿಗೆ ಕಾಣಲಿಲ್ಲ. ಲಕ್ಷ್ಮಿ ಹೇಳಿದಳು, "ಇದೇ ಕಿಷ್ಕಿಂಧೆ ಇರಬೇಕು. ಇಲ್ಲಿಯೇ ವಾಲಿಸುಗ್ರೀವರನ್ನು ಶ್ರೀರಾಮನು ಸಂಧಿಸಿ ಈ ಮಾರ್ಗವಾಗಿಯೇ ಲಂಕೆಗೆ ಹೋಗಿರಬೇಕು" ಎಂದು.

"ನಿನಗೆ ಹೇಗವ್ವ, ಗೊತ್ತು? ವಾಲಿ ಸುಗ್ರೀವ ಇದ್ದಿದ್ದರೆ ಅವರ ಅರಮನೆಗಳ ಗುರುತಾದರೂ ಇರಬೇಕಲ್ಲ" ಎಂದು ರಂಗಸ್ವಾಮಿ ತರ್ಕ ಮಾಡುತ್ತಿದ್ದ.

"ಇಂಥ ಅರಣ್ಯದಲ್ಲಿ ವಾಸಿಸದೆ ಮತ್ತೆಲ್ಲಿದ್ದರು? ಇಲ್ಲಿಂದಲೇ ದಕ್ಷಿಣಾಭಿಮುಖವಾಗಿ ಸಮುದ್ರಯಾನ ಮಾಡಿದ್ದು."

"ಮತ್ತೆ, ರಾಮಾಯಣದಲ್ಲಿ ಬರೆದಿಲ್ಲವಲ್ಲ—ತಿರುಪತಿ ಹತ್ತಿರ ಇರುವ ಬೆಟ್ಟಗಳಿಗೆ ಕಿಷ್ಕಿಂಧೆ ಎಂದು ಹೆಸರು; ಇಲ್ಲೇ ವಾಲಿಸುಗ್ರೀವ ಇದ್ದರು; ಶ್ರೀರಾಮ ಇಲ್ಲಿ ಅವರನ್ನು ಸಂಧಿಸಿದ, ಅಂತ."

ಹೀಗೆ ತಾಯಿಗೂ ಮಗನಿಗೂ ನಡೆಯುತ್ತಿದ್ದ ತರ್ಕವನ್ನು ಮೌನವಾಗಿ ಕೇಳುತ್ತಾ ನಾನು ಹಿಂದೆ ಹಿಂದೆ ಹೋಗುತ್ತಿದ್ದೆ. ದಣಿವಾರಿಸಿಕೊಳ್ಳಲು ಒಂದು ಎತ್ತರವಾದ ಪ್ರದೇಶದಲ್ಲಿ ನಾವು ಮೂವರೂ ಕುಳಿತೆವು. ನಾನು ಸುತ್ತಲೂ ಕಣ್ಣರಳಿಸಿ ನೋಡಿದೆ. ವಿಪುಲ ಕಾಂತಿಯಿಂದ ಮಿರುಗುವ ಆ ವನದೇವತೆಯ ತಳಿರು, ನಾನಾ ರಂಗಿನ ಪುಷ್ಪಗಳ ಕಾಂತಿ, ಅವುಗಳ ಕಂಪು ಇಂಪು ನನ್ನ ಆಯಾಸವನ್ನೆಲ್ಲ ಕಳೆದು, ಕುಗ್ಗಿದ ನನ್ನ ಮನಸ್ಸಿಗೆ ಹೊಸ ಚೈತನ್ಯವನ್ನು ತುಂಬುತ್ತಿದ್ದುವು. ನಮ್ಮ ಹುಡುಗ ಮಾತ್ರ ತೆಪ್ಪನೆ ಕೂಡುತ್ತಲೇ ಇರಲಿಲ್ಲ. ಬಣ್ಣಬಣ್ಣದ ಹೂಗೊಂಚಲನ್ನು ಕಿತ್ತು ಕಿತ್ತು ಜೇಬಿಗೆ ತುರುಕುತ್ತಿದ್ದ. ಒಂದೊಂದು ಸಾರಿ ಕಡಿದಾದ ಕಣಿವೆಗಳಲ್ಲಿ ಮುನ್ನೂರು ನಾನೂರು ಗಜಗಳ ದೂರ ಇಳಿಯಬೇಕಾಗಿತ್ತು. ಹಾಗೆ ಇಳಿಯುವಾಗ ಎಷ್ಟೋ ಸಾರಿ ನಾನು ಮುಗ್ಗರಿಸಿ ಹೆಬ್ಬೆಟ್ಟಿನ ಸಹಾಯದಿಂದ ನಿಲ್ಲುತ್ತಿದ್ದೆ. ಹಾದಿಯ ಎಡಬಲ ಪಕ್ಕಗಳಲ್ಲಿರುವ ರೆಂಬೆಗಳು ಮೊಳ

ದುದ್ದದ ಹೂಗೊಂಚಲುಗಳನ್ನು ಮುಡಿದು ದಾರಿಗೆ ಬಾಗಿಕೊಂಡು ಗಾಳಿಗೆ ಬಳುಕುತ್ತಿದ್ದುವು. ಮರಗಳ ಮೇಲಿಂದ ಜೋಲುಬಿದ್ದು ನೇತಾಡುತ್ತಿದ್ದ ಬಳ್ಳಿಯ ಕಂತೆಗಳು ಚಾಮರಗಳಂತೆ ಬೀಸಿ ನಮ್ಮ ದಣಿವಾರಿಸುತ್ತಿದ್ದುವು. ಬೆಟ್ಟದ ತುತ್ತತುದಿಯಿಂದ ಹರಿದು ಬರುವ ಝುರಿಯ ಇಂಪಾದ ಎಡೆಬಿಡದ ಗಾನ, ಕೋಗಿಲೆಯ ಸುಮಧುರ ಮಂಜುಳ ಕಂಠಧ್ವನಿಯ ಇಂಪು—ನಮ್ಮ ಮನಸ್ಸನ್ನು ಸೆಳೆದು ನಿಲ್ಲಿಸುತ್ತಿದ್ದುವು. ದಾರಿಯುದ್ದಕ್ಕೂ ವನದೇವತೆಯು ತನ್ನ ಲತೆಗಳನ್ನು ಹಾಸುಹೊಕ್ಕಾಗಿ ಹೆಣೆದು ಯಾತ್ರಿಕರ ಆಯಾಸವನ್ನು ದೂರಮಾಡಲು ನೆಳಲನ್ನು ಎರಚುತ್ತಿದ್ದಳು. ಬಗೆ ಬಗೆಯ ಹಕ್ಕಿ, ಹುಳು ಹುಪ್ಪಟೆಗಳು ನಮ್ಮ ಮನಸ್ಸನ್ನು ಸೆಳೆಯುತ್ತಿದ್ದುವು. ನಡೆದು ನಡೆದು ನಾವು ದೊಡ್ಡದೊಂದು ಅರಣ್ಯಕಂದರಕ್ಕೆ ಇಳಿದೆವು. ಅಲ್ಲಿ ಪಾವನಳಾದ 'ಪಾಪನಾಶಿನಿ' ತೀರ್ಥಗಂಗೆ ಪರ್ವತಶಿಖರದಿಂದ ಹರಿದು ಬೀಳುತ್ತಿದ್ದ ಸದ್ದು ನಮ್ಮ ಕಿವಿಗಳ ಮೇಲೆ ಬಡಿಯಿತು. ನಮಗೆಲ್ಲರಿಗೂ ಆನಂದ ಉಂಟಾಯಿತು; ಇನ್ನೇನು ಸಿಕ್ಕಿತು, ಎಂದು. ಸಮೀಪಕ್ಕೆ ಹೋದೆವು. ಪಕ್ಕದಲ್ಲೆ ನಾಲ್ಕೈದು ಗುಡಿಸಲುಗಳಿದ್ದುವು. ರಂಗಸ್ವಾಮಿಗೆ ಯಾವುದು ಕಣ್ಣಿಗೆ ಬೀಳದಿದ್ದರೂ ಹೊಟೇಲುಗಳು ಬ ಹು ಬೇ ಗ ಕಾಣಿಸಿಕೊಳ್ಳುತ್ತವೆ. ಹೊಟೇಲುಗಳನ್ನು ನೋಡಿ ಅವನು ತುಂಬಾ ಹಿಗ್ಗಿಹೋದ. ಅವೆಲ್ಲಿಂದಲೊ ಪರ್ವತದ ತುತ್ತ ತುದಿಯಿಂದ ಪಾವನ ಗಂಗೆ ಹರಿದು ಬೀಳುತ್ತಿದ್ದಳು. ಹಾಸಿದ್ದ ಬಂಡೆಯ ಮೇಲೆ ಹರಿದು ಬೀಳುತ್ತಿದ್ದ ನೀರು ಹಾಗೆಯೆ ಸುತ್ತಲೂ ಛಿಲ್ಲೆಂದು ಮೇಲಕ್ಕೆ ಹಾರಿ ನಾನಾ ಗಾತ್ರದ ಬಿಳಿಯ ಮುತ್ತುಗಳನ್ನು ಎರಚುತ್ತಿತ್ತು.

"ಅಲ್ಲಿ, ಅಲ್ಲಿ ಎಷ್ಟೊಂದು ಮುತ್ತುಗಳು!" ಎಂದು ಕೈ ಕೈತಟ್ಟುತ್ತಿದ್ದ ರಂಗಸ್ವಾಮಿ. ಹಾಗೆ ಬಿದ್ದನೀರು ಮೆಲ್ಲನೆ ಕೆಳಗಿನ ಕಮರಿಯಲ್ಲಿ ಹಾವಿನಂತೆ ಹರಿದು ಹೋಗುತ್ತಿತ್ತು.

"ಏನಪ್ಪ, ಇಲ್ಲಿ ಸ್ನಾನ ಮಾಡಿದ್ರೆ ಪಾಪ ಈ ನೀರಿನಲ್ಲಿ ಕೊಚ್ಚಿಕೊಂಡು ಹೋಗ್ತದೆಯೆ?" ಎಂದ ರಂಗಸ್ವಾಮಿ.

"ನಿನಗೇತಕ್ಕೊ ಅದೆಲ್ಲ?" ಎಂದೆ ನಾನು.

"ಹೇಳಪ್ಪ, ನಾನು ತಿಳ್ಕೊಳ್ಳುವ ಅಂದರೆ."

"ಹೌದು ಕಣೊ. ಇಲ್ಲಿ ಸ್ನಾನ ಮಾಡಿದರೆ ಪಾಪ ಪರಿಹಾರವಾಗುತ್ತಂತೆ, ಅಷ್ಟು ಗೊತ್ತು."

"ಅದ್ಹೇಗೆ ಪಾಪ ಹೋದೀತು? ಹೋಗುವುದು ನಮಗೆ ಹೇಗೆ ಗೊತ್ತಾಗುತ್ತದೆ?"

ನನಗೆ ಉತ್ತರ ಹೇಳಲು ಬಹಳ ಪೇಚಾಟಕ್ಕಿಟ್ಟುಕೊಂಡಿತು. ಆ ದೊಡ್ಡ ಪ್ರಶ್ನೆಗೆ ಏನು ಉತ್ತರ ಹೇಳಲಿ?"

"ನಡಿಯೋ, ಮೊದಲು ಸ್ನಾನಮಾಡು" ಎಂದು ಗದರಿಸಿದೆ. ಹುಡುಗ ತೆಪ್ಪನಾದ. ಮೇಲಿಂದ ಒಂದು ಕಬ್ಬಿಣದ ಸರಪಳಿಯನ್ನು ನೇತುಬಿಟ್ಟಿದ್ದಾರೆ. ಅದನ್ನು ಬಲವಾಗಿ ಹಿಡಿದುಕೊಂಡು ಮೇಲಿಂದ ಬೀಳುತ್ತಿದ್ದ ತೀರ್ಥಕ್ಕೆ ಒಬ್ಬೊಬ್ಬರಾಗಿ ತಲೆಯೊಡ್ಡಿದೆವು. ನನಗಂತೂ ಮೈಕೊರೆತ ಸಹಿಸಲಾಗಲಿಲ್ಲ. ಅಲ್ಲಿ ಮೂವರೂ ಮಿಂದು ಹರ್ಷಚಿತ್ತರಾದೆವು. ಅಲ್ಲಿ ನಿಂತು ತಲೆ ಎತ್ತಿ ನೋಡಿದೆ. ಸುತ್ತಲೂ ಹರಡಿದ್ದ ಹೆಬ್ಬನದ ರಾಶಿ ಇನ್ನೇನು ನನ್ನ ಮೇಲೆಯೇ ಕಳಚಿ ಬೀಳುವ ಹಾಗೆ ಕಂಡಿತು. ಆ ವನರಾಜಿಯ ಪರ್ವತಸ್ತೋಮಗಳ ಸೃಷ್ಟಿ ಯಾವಾಗ ನಡೆಯಿತೊ ಯಾರು ಬಲ್ಲರು? ಆ ಪ್ರಕೃತಿ ಭೀಕರ ಮೃಗರಾಶಿಗಳ ತೌರುಮನೆಯಾಗಿರುವಂತೆ ತಪಸ್ವಿಗಳ ನಿವಾಸ ಸ್ಥಾನ; ಭಯಾವಹವಾದರೂ ಸೃಷ್ಟಿ ವೈಚಿತ್ರ್ಯದ ಬೆಡಗು ಬಿನ್ನಾಣಗಳು ಎದ್ದು ಕಾಣುತ್ತಿದ್ದ ಸ್ಥಾನ ಅದು. ಪ್ರಕೃತಿಯ ದೇಗುಲದಲ್ಲಿ ಎರಚಾಡುತ್ತಿದ್ದ ದೈವಕಲೆಯ ಸೌಂದರ್ಯ ರಸವನ್ನು ಕಣ್ತುಂಬ ನೋಡಿ ಮನಸಾರೆ ಅನುಭವಿಸಿದೆವು, ನಾವು. ಆ ಭವ್ಯಸುಂದರ ದೃಶ್ಯ ನನ್ನ ಮತ್ತು ಲಕ್ಷ್ಮಿಯ ಚಿತ್ತಭಿತ್ತಿಯ ಮೇಲೆ ಚಿರ ಮುದ್ರೆಯನ್ನು ಒತ್ತಿಬಿಟ್ಟಿತು. ನಮ್ಮ ಭಾಗಕ್ಕೆ ಅದೊಂದು ಅಮರ ಸುಖದ ದಿವ್ಯ ದಿನ.

ಪಾಪನಾಶಿನಿ ಗಂಗೆ ಬೀಳುವ ಮಗ್ಗುಲಲ್ಲೇ ಒಬ್ಬ ಪೂಜಾರಿ ಒಂದು ಮಣೆಯ ಮೇಲೆ ಎರಡು ತಾಮ್ರದ ಲೋಟಗಳಲ್ಲಿ ನೀರು ತುಂಬಿಟ್ಟು ಕೊಂಡು, ಅವುಗಳಿಗೆ ಪುಷ್ಪಗಳನ್ನು ಮುಡಿಸಿ, ಒಂದು ಓಲೆಗರಿಯ ಪುಸ್ತಕವನ್ನು ತೆಗೆದಿಟ್ಟುಕೊಂಡು ಕುಳಿತಿದ್ದನು.

"ಏನು ಸ್ವಾಮಿ, ಇದು?" ಎಂದೆ ನಾನು.

"ಮಂತ್ರ ಜಪಿಸುತ್ತೇನೆ—ಅಪಮೃತ್ಯುಗಳಿಂದ ಪಾರಾಗಲು. ಸತಿಪತಿಗಳಿಗೆ ಸುಖಜೀವನ ಉಂಟಾಗುತ್ತದೆ. ಬಂದ ಗಂಡಾಂತರಗಳೆಲ್ಲಾ ಬಯಲಾಗುತ್ತವೆ" ಎಂದರು.

"ಸರಿ, ಹಾಗಾದರೆ ಪುಣ್ಯ ಕಟ್ಟಿಕೊಳ್ಳಲು ಒಳ್ಳೆ ಧರ್ಮಕಾರ್ಯಕ್ಕೆ

ಕೈ ಹಾಕಿದ್ದೀರಿ!"

"ಹೊಟ್ಟೆಪಾಡು ನಡೆಯಬೇಕಲ್ಲ, ಸ್ವಾಮಿ?"

"ಹಾಗಂದರೆ ಕಾಣಿಕೆ....ಅನ್ನಿ."

"ಹೌದು ಸ್ವಾಮಿ; ಹೆಚ್ಚಾಗಿಲ್ಲ. ಸತಿಪತಿಗಳಿಂದ ಹತ್ತು ಆಣೆ ಎರಡು ದುಡ್ಡು"

"ಅದೇನು ಸ್ವಾಮಿ, ಮೇಲೆ ಎರಡು ದುಡ್ಡು ಇಟ್ಟಿದ್ದೀರಿ?"

"ಹಿಂದಿನಿಂದ ನಿಗದಿಯಾಗಿದೆ, ಅಷ್ಟೆ"

"ಅಂತು ಶ್ರೀವೆಂಕಟೇಶ ಈ ಮಲೆಯಲ್ಲಿರುವ ಪ್ರಾಣಿಗಳಿಗೆಲ್ಲ ಸುಖ ಜೀವನ ಕೊಡುತ್ತಾನಲ್ಲ! ಎಂಥಾ ಕರುಣಾಮಯ!"

"ಆ ಭಗವಂತನ ನಾಮಸ್ಮರಣೆಯಿಂದಲೇ ನಾವೆಲ್ಲಾ ಈ ಅರಣ್ಯದಲ್ಲೂ ಹೊನ್ನಿನ ಮಳೆ ಸುರಿಸುತ್ತೇವೆ ಒಂದೊಂದು ದಿನ"

"ಸರಿ, ಸ್ವಾಮಿ. ಇನ್ನೊಂದು ಸಾರಿ ಬರುತ್ತೇವೆ"

ಆ ಸ್ವಾಮಿಗಳ ಕಣ್ಣುಗಳು ಆಶಾಭಂಗದ ದೃಷ್ಟಿಯಿಂದ ನನ್ನ ಕಡೆ ಹೊರಳಿದ್ದನ್ನು ನೋಡಿಯೂ ನಾನು ಹಿಂದಿರುಗಿದೆ. ಅಷ್ಟರಲ್ಲಿ ಹನ್ನೊಂದು ಘಂಟೆಯಾಯಿತು. ಅಲ್ಲಿದ್ದ ಹೊಟೇಲುಗಳಿಗೆ ನುಗ್ಗಿದೆವು. ಅವು ಮಹಡಿ ಮನೆಗಳೇನಲ್ಲ. ಹುಲ್ಲುಜೋಪಡಿಗಳು. ಅಲ್ಲಿ ಅಕ್ಕಿಯ ಕಡುಬು ದೋಸೆಗಳು ಬಹಳ ಅಗ್ಗ. ಶುಚಿ ಮುತ್ತು ರುಚಿಯಲ್ಲಿ ಯಾವ ನಗರಗಳಲ್ಲಿನ ಹೋಟಲುಗಳಿಗೇನೂ ಕಡಿಮೆ ಇರಲಿಲ್ಲ. ಕಡುಬು ದೋಸೆ ತಿಂದು, ಹಸಿವನ್ನು ಅಡಗಿಸಿಕೊಂಡೆವು. ಮಸಾಲೆ ದೋಸೆ ರಂಗಸ್ವಾಮಿ ಕೈಮೇಲೆ ಬಿದ್ದಾಗ ಮುಖವನ್ನು ಊರಗಲ ಮಾಡಿಕೊಂಡು ಹಲ್ಲು ಕಿರಿಯುತ್ತಿದ್ದ. ನಮಗೆ ಮುಖ್ಯವಾಗಿ ಬೇಕಾಗಿದ್ದ ಕಾಫಿಯಂತೂ ಗಟ್ಟಿಹಾಲಿನಿಂದ ಮಾಡಿದ್ದು. ತೃಪ್ತಿಯಾಗುವಷ್ಟು ಕುಡಿದೆವು. ಹೋಟಲಿನವರು ಮಂಗಳೂರು ಕಡೆ ಬ್ರಾಹ್ಮಣರು. ಉಡುಪಿ, ಮಂಗಳೂರು ಕಡೆ ಬ್ರಾಹ್ಮಣರು ಬಹಳ ಸಾಹಸಿಗಳು. ನೀಲಗಿರಿ ಬೆಟ್ಟದ ತುತ್ತತುದಿಯಲ್ಲಿಯೂ ಹೋಟಲುಗಳನ್ನು ಇಟ್ಟುಕೊಂಡು ಆ ಅರಣ್ಯದಲ್ಲೇ ವಾಸಿಸುತ್ತಿರುವುದನ್ನು ನಾನು ಒಮ್ಮೆ ನೀಲಗಿರಿಗೆ ಹೋಗಿದ್ದಾಗ ನೋಡಿ ಆಶ್ಚರ್ಯಪಟ್ಟೆ. ಹಿಮಾಲಯ ಪರ್ವತದ ತಪ್ಪಲಲ್ಲೂ ಹೋಟಲು ಇಟ್ಟಿದ್ದಾರೆ ಅಂತ ಕಾಣುತ್ತೆ—ಬದರಿನಾಥ, ಅಮರನಾಥ ಯಾತ್ರಿಕರಿಗೋಸ್ಕರ. ನಾನು ಮಾತನಾಡಿದ್ದು ಕನ್ನಡದಲ್ಲಿ. ಆದ್ದರಿಂದ ನಮ್ಮನ್ನು ಮೈಸೂರು ಕಡೆಯವರೆಂದು ಸುಲಭವಾಗಿ ಪತ್ತೆಹಚ್ಚಿದರು. ನಮ್ಮನ್ನು ವಿಶ್ವಾಸದಿಂದ ಕಂಡರು

ಆ ಮಹರಾಯರು. ಪಾಪನಾಶಿನಿ ತೀರ್ಥದ ವಿಚಾರವಾಗಿ ಒಂದೆರಡು ಪ್ರಶ್ನೆ ಹಾಕಿದೆ, ಅಲ್ಲಿದ್ದ ಹೋಟಲಿನ ಯಜಮಾನರಿಗೆ. ಅವರಿಗೆ ತಿಳಿದಿರುವ ವಿಷಯವನ್ನು ಹೇಳಿದರು:

"ಬ್ರಹ್ಮರಾಕ್ಷಸನಿಂದ ಪೀಡಿತನಾದ ಮನುಷ್ಯನೊಬ್ಬನು ಬುದ್ಧಿ ಭ್ರಮೆ ಹಿಡಿದವನಾಗಿ ಸಂಚರಿಸುತ್ತಿದ್ದಾಗ ಅಗಸ್ತ್ಯ ಮಹರ್ಷಿಗಳು ಆತನನ್ನು ಅನುಗ್ರಹಿಸಿ, ಶ್ರೀ ವೆಂಕಟಾಚಲಕ್ಕೆ ಕರೆತಂದು, ಈ ತೀರ್ಥದಲ್ಲಿ ಸ್ನಾನ ಮಾಡಿಸಿದರು. ಈ ಸ್ನಾನದ ಮಹಿಮೆಯಿಂದ ಆತ ಮುಕ್ತನಾದ. ಆಶ್ವಯುಜ ಶುದ್ಧ ಸಪ್ತಮಿ ದಿನ ಈ ತೀರ್ಥಸ್ನಾನ ಬಹಳ ಪುಣ್ಯಕರವಾದುದೆಂದು ಪ್ರತೀತಿ" ಎಂದರು.

ಪಾಪನಾಶಿನಿ ತೀರ್ಥದಿಂದ ಉತ್ತರಕ್ಕೆ ಒಂಬತ್ತು ಮೈಲಿಗಳ ದೂರದಲ್ಲಿ ತುಂಬರು ತೀರ್ಥವಿದೆ. ಅರಣ್ಯದ ಮಧ್ಯೆ ಸಣ್ಣ ಕಾಲುಹಾದಿ ಹರಿದು ಹೋಗಿದೆ, ಅಲ್ಲಿಗೆ. ಸಾಮಾನ್ಯವಾಗಿ ಧೈರ್ಯಸ್ಥರಾದ ಗಂಡಸರು ಮಾತ್ರ ಅಲ್ಲಿಗೆ ಹೋಗುತ್ತಾರೆ. ತಂಬುರನೆಂಬ ಗಂಧರ್ವನು ಇಲ್ಲಿ ತಪಸ್ಸು ಮಾಡಿ ಸಿದ್ಧಿಪಡೆದನಂತೆ! ಪುರಾಣ ಪ್ರಸಿದ್ಧವಾಗಿ ಈ ಪರ್ವತದಲ್ಲಿ ಅನೇಕ ಕೋಟಿ ತೀರ್ಥಗಳಿವೆ. ಅವುಗಳಲ್ಲಿ ನೂರೆಂಟು ತೀರ್ಥಗಳೇ ಮುಖ್ಯವಾದುವು. ಅವುಗಳ ವಿಚಾರವನ್ನು ವಿಶದವಾಗಿ ತಿಳಿದುಕೊಳ್ಳುವ ಲವಲವಿಕೆ ಇಲ್ಲದೆ ನಾವು ಅಲ್ಲಿಂದ ಹೊರಟೆವು. ರಂಗಸ್ವಾಮಿ ಹೊಟ್ಟೆಗೆ ಬಲವಾಗಿ ಬಿದ್ದಿದ್ದರಿಂದ, ಕಡಿದಾದ ಬೆಟ್ಟವನ್ನು ಹೆಚ್ಚು ಹುಮ್ಮಸ್ಸಿನಿಂದ ಹಕ್ಕಿಯ ಮರಿಯಂತೆ ಹಾರಿ ಹಾರಿ ಹತ್ತುತ್ತಿದ್ದ. ನಮ್ಮನ್ನು ತಟ್ಟುತ್ತಿದ್ದ ಸೂರ್ಯನ ಕಿರಣಗಳ ಚುರುಕನ್ನು ಆ ಬನಸಿರಿಯ ಮೈಮೇಲೆ ಬೀಸಿ ಬರುತ್ತಿದ್ದ ತಂಗಾಳಿಯ ತಂಪು ಆರಿಸುತ್ತಿತ್ತು. ಮೆಲ್ಲಮೆಲ್ಲನೆ ಹತ್ತಿ ಒಂದೂವರೆ ಮೈಲಿ ದೂರ ದಾರಿಯನ್ನು ಸಾಗಿಸಿದೆವು. ಮಧ್ಯೆ ಸಮತಟ್ಟಾದ ಕಾಡು; ಅಲ್ಲಿ ಹತ್ತಿರಾಂ ಬಾವಾಜಿ ಸ್ವಾಮಿಗಳ ಮಠವಿದೆ. ಆ ಕಟ್ಟಡ ಚಿಕ್ಕದಾಗಿದ್ದರೂ ಬಹು ನಾಜೋಕಾಗಿ, ಒಂದು ಸುಂದರವಾದ ಮಂಟಪದಂತೆ ಕಾಣುತ್ತದೆ. ಅಲ್ಲಿನ ಹೊರಾಂಗಣದಲ್ಲಿ ಮೂವರೂ ಕುಳಿತೆವು. ಸುತ್ತಲೂ ಹಬ್ಬಿದ ಬೆಟ್ಟ ಗುಡ್ಡಗಳ ರಾಶಿ ನಮ್ಮ ಕಣ್ಣುಗಳಿಗೊಂದು ಹಬ್ಬವಾಗಿತ್ತು. ಹತ್ತಿರಾಂಬಾವಜಿ ಸ್ವಾಮಿಗಳಿಗೂ ಆಂಜನೇಯನಿಗೂ ಆರತಿ ಮಾಡಿಸಿದೆವು, ನಾಲ್ಕು ಆಣೆ ಕೊಟ್ಟು. ಹತ್ತೀರಾಮನೆಂಬ ವಿರಕ್ತನೊಬ್ಬನು ಶ್ರೀ ವೆಂಕಟೇಶ್ವರನ ಸಂಗಡ ಪಗಡೆಯಾಡುತ್ತಿದ್ದನಂತೆ. ಆತ ಶ್ರೀನಿವಾಸನ ಕೃಪೆಗೆ ವಿಶೇಷ

ವಾಗಿ ಪಾತ್ರನಾಗಿದ್ದನು. ಆತನ ಶಿಷ್ಯರು ಈಕ್ಷೇತ್ರಕ್ಕೆ ಅಧಿಕಾರಿಗಳಾಗಿದ್ದರು. ಅವರ ಶಿಷ್ಯಪರಂಪರೆಯವರಾದ ಶ್ರೀ ರಾಮಲಕ್ಷ್ಮಣದಾಸ್ ಬಾವಾಜಿಯವರು ಈಗಿನ ಅಧಿಕಾರಿಗಳು. ಶ್ರೀ ಮಹಂತರಾಮ ಕಿಶೋರ ದಾಸರ ಪ್ರಿಯ ಶಿಷ್ಯರು, ಅವರು.

ಈ ಪರ್ವತಗಳ ಗುಂಪಿಗೆ ಚಿಂತಾಮಣಿ, ಜ್ಞಾನಾದ್ರಿ, ತೀರ್ಥಾಚಲ, ವರಾಹಾದ್ರಿ, ಕನಕಾದ್ರಿ, ನಾರಾಯಣಾದ್ರಿ, ವೈಕುಂಠಾದ್ರಿ, ನರಂಸಿಹಾದ್ರಿ, ಆನಂದಾದ್ರಿ, ಗರುಡಾದ್ರಿ, ಪುಷ್ಕರಗಿರಿ, ಶ್ರೀನಿವಾಸಗಿರಿಯೆಂದು ಅನೇಕ ಹೆಸರುಗಳಿವೆ. ಕೃತಯುಗದಲ್ಲಿ, ಈ ಪರ್ವತದಲ್ಲಿ ವೃಷಭಾಸುರನ ಸಂಹಾರ ವಾದುದರಿಂದ ವೃಷಭಾದ್ರಿಯೆಂದೂ, ತ್ರೇತಾಯುಗದಲ್ಲಿ ಅಂಜನಾದೇವಿ ಆಂಜನೇಯನನ್ನು ಪಡೆದ ಕಾರಣದಿಂದ ಅಂಜನಾದ್ರಿಯೆಂದೂ, ದ್ವಾಪರ ಯುಗದಲ್ಲಿ ವಾಯುದೇವನಿಗೂ ಆದಿಶೇಷನಿಗೂ ವಿವಾದ ಜರುಗಿದ ಕಾರಣ ದಿಂದ ಶೇಷಾದ್ರಿಯೆಂದೂ, ಕಲಿಯುಗದಲ್ಲಿ ಶರಣಾಗತರ ಪಾಪಗಳನ್ನು ಪರಿ ಹಾರ ಮಾಡಿಸುವುದರಿಂದ ವೆಂಕಟಾಚಲವೆಂತಲೂ ಸುಪ್ರಸಿದ್ಧ ಹೆಸರು ಗಳಿವೆ.

ಶ್ರೀ ವೆಂಕಟೇಶನ ದೇವಸ್ಥಾನದಲ್ಲಿ ಒಂದು ಘಂಟೆಗೆ ಧರ್ಮದರ್ಶನ ವಿದ್ದುದರಿಂದ ನಮ್ಮ ಮುಂದೆ ಬಿದ್ದಿದ್ದ ಎರಡು ಮೈಲಿ ಹಾದಿಯನ್ನು ಸ್ವಲ್ಪ ಶ್ರಮದಿಂದಲೆ ಸಾಗಿಸಿದೆವು. ದೇವಸ್ಥಾನವನ್ನು ಸೇರುವಷ್ಟರಲ್ಲೆ ಸ್ವಾಮಿಗೆ ಅಭಿಷೇಕ ಮಾಡಲು ಪ್ರಾರಂಭವಾಗಿರುವುದನ್ನು ಜಾಗಟೆಯ ಸುಮಧುರ ನಾದವು ಸೂಚಿಸುತ್ತಿತ್ತು. ದೇವಸ್ಥಾನದ ಎತ್ತರವಾದ ಗೋಪುರದ ಮೇಲೆಲ್ಲ ನಾನಾ ದೇವದೇವತೆಯರ ಚಿತ್ರಗಳು ತುಂಬಿ ತುಳುಕಾಡುತ್ತಿದ್ದುವು. ದೇವರನ್ನು ನಿರಾಕಾರ ನಿರ್ಗುಣನೆಂದು ಸಾರಿದ ನಮ್ಮ ಧರ್ಮ ಎಷ್ಟೊಂದು ದೇವರುಗಳನ್ನು ಸೃಷ್ಟಿಸಿದೆ ಎಂದು ಅಚ್ಚರಿಯಾದೆ! ಬಹುಶಃ ಆಕಾರದಿಂದ ನಿರಾಕಾರದೆಡೆಗೂ ಸಗುಣದಿಂದ ನಿರ್ಗುಣಕ್ಕೂ ಏರಬಹು ದೇನೋ ಎಂದುಕೊಂಡು, ದೇವಸ್ಥಾನದ ಒಳಗೆ ನುಗ್ಗಿದೆ.

ದೇವಸ್ಥಾನದ ದ್ವಾರದಲ್ಲಿ ವಿಜಯನಗರದ ಸಾಮ್ರಾಟ ಕೃಷ್ಣದೇವ ರಾಯ ಮತ್ತು ಆತನ ಸತಿಯರಾದ ತಿರುಮಲಾದೇವಿ, ಚಿನ್ನಾದೇವಿಯವರ ಪ್ರತಿಮೆಗಳು ಪ್ರತಿಷ್ಠಿತವಾಗಿವೆ. ಆ ಮಹಾರಾಜ, ಮಹಾರಾಣಿಯರ ಪ್ರತಿಮೆಗಳು ವಿಜಯನಗರ ಸಾಮ್ರಾಜ್ಯದ ಗತಕಾಲದ ವೈಭವವನ್ನು ಸುಸಂಸ್ಕೃತ ಹಿಂದುಗಳ ಮನಸ್ಸಿನಲ್ಲಿ ಮತ್ತೆ ಮಿಂಚಿಸುತ್ತವೆ. ದೊರೆ,

ಕೃಷ್ಣದೇವರಾಯನು ತಿರುಪತಿ ದೇವಸ್ಥಾನಕ್ಕೆ ವಿಶೇಷವಾಗಿ ದತ್ತಿಗಳನ್ನು ಕೊಡುತ್ತಿದ್ದನು. ದೊರೆಯೂ ಆತನ ಮಡದಿಯರೂ ಶ್ರೀ ವೆಂಕಟೇಶ ಸ್ವಾಮಿಯ ಅವಿಚ್ಛಿನ್ನ ಭಕ್ತರು.

ಕೀರ್ತಿ ಶಿಖರವನ್ನೇರಿದ್ದ ವಿಜಯನಗರ ಸಾಮ್ರಾಜ್ಯಶ್ರೀ, ಸದಾ ಕಾಮುದ ದೃಷ್ಟಿಯಿಂದ ಕೂಡಿದ್ದ ಮುಸಲ್ಮಾನ ದೊರೆಗಳ ತೋಳತೆಕ್ಕೆಯಲ್ಲಿ ಬಂಧಿತಳಾದಳು. ಆದರೆ ರಾಜಮನತನದವರ ದೈವಭಕ್ತಿ ನಿರಂತರವಾಗಿ ಸಾಗಿತ್ತು. ಸಾಮ್ರಾಜ್ಯ ಒಡೆದು ಹೋದ ಮೇಲೆಯೂ ಆ ರಾಜ ಸಂತತಿಯಲ್ಲಿ ದೇವಸ್ಥಾನಕ್ಕೆ ದತ್ತಿಗಳನ್ನು ಕೊಟ್ಟ ಕೊನೆಯವನು ಮಟ್ಲ ಕುಮಾರ ಅನಂತರಾಜಯ್ಯ.

ಜಾಗಟೆಯ ನಾದ ದೇವಸ್ಥಾನದ ಕೈಸಾಲೆಯನ್ನೆಲ್ಲ ತುಂಬಿ ದೈವ ಭಕ್ತಿಯನ್ನು ಯಾತ್ರಿಕರ ಎದೆಯ ಮೇಲೆ ತಟ್ಟುತ್ತಿತ್ತು. ನೂರಾರು ಮಂದಿ ಯಾತ್ರಿಕರು ಸಾಲುಸಾಲಾಗಿ ಒಬ್ಬರ ಹಿಂದೆ ಒಬ್ಬರು ನಿಂತಿದ್ದರು. ಸುಮಾರು ಹದಿನೈದು ಅಡಿ ಎತ್ತರದ ವಿಶಾಲವಾದ ಕೈಸಾಲೆಯ ಮಧ್ಯದಲ್ಲಿ ನಲವತ್ತೈದು ಅಡಿ ಉದ್ದದ ಹೊಂಬಣ್ಣದ ಗರುಡಗಂಬ; ಅಲ್ಲಲ್ಲಿ ದೇವತೆಗಳ ಕಂಚಿನ ವಿಗ್ರಹಗಳು, ಚಿತ್ರಕಲಾಕೌಶಲ್ಯವನ್ನು ಮೆತ್ತಿ ಕೆತ್ತಿದ್ದ ಕಂಬಗಳ ಯಜ್ಞಮಂಟಪ, ವಿಶಾಲವಾದ ಪ್ರಾಕಾರದ ಕಲ್ಲು ಗೋಡೆಗೆ ಸೇರಿದಂತೆ ಸುತ್ತಲೂ ಸಣ್ಣ ಸಣ್ಣ ದೇವಸ್ಥಾನಗಳು, ಪ್ರಾಕಾರದ ಗೋಡೆಗೆ ಹಾಕಿದ್ದ ಪ್ರತಿಯೊಂದು ಕಲ್ಲುಗಳ ಮೇಲೆ ಭಿನ್ನ ಭಿನ್ನ ಭಾಷೆಯಲ್ಲಿ ಕೆತ್ತಿದ್ದ ಪುರಾತನ ಆರ್ಯಸಂಸ್ಕೃತಿಯ ಶಾಸನ—ಎಲ್ಲವೂ ಒಂದೊಂದಾಗಿ ನನ್ನನ್ನು ವಿಸ್ಮಯಗೊಳಿಸುತ್ತಿದ್ದುವು. ದ್ರಾವಿಡರ ಶಿಲ್ಪಕಲೆಯ ಪ್ರತಿಬಿಂಬದಂತೆ ಕಾಣುತ್ತಿತ್ತು ದೇವಾಲಯ. ನಾವು ಮೂವರೂ ತುಸು ದೂರದಲ್ಲಿ ನಿಂತೆವು. ಒಂದು ಘಂಟೆಯ ಸುಮಾರಿಗೆ ಜಾಗಟೆಯ ನಾದ ಮೆಲ್ಲಮೆಲ್ಲನೆ ಸಣ್ಣಸಣ್ಣದಾಗುತ್ತ, ಕಡೆಗೆ ವಿಶಾಲ ವಾಯುಮಂಡಲದಲ್ಲಿ ಎಲ್ಲಿಯೋ ತಲ್ಲೀನವಾಯಿತು. ಗರ್ಭಾಂಕಣದಿಂದ ಪೂಜಾರಿಗಳು ನೈವೇದ್ಯ ತುಂಬಿ ದೇವರಿಗೆ ಎಡೆ ಇರಿಸಿದ್ದ ಹೊಸ ಹೊಸ ಮಡಕೆಗಳನ್ನು ಹೆಗಲ ಮೇಲೆ ಹೊತ್ತುಕೊಂಡು ಸಡಗರದಿಂದ ಹೊರಬಿದ್ದರು. ಕೆಲವರ ಹೆಗಲ ಮೇಲೆ ಪಂಚಾಮೃತ ತುಂಬಿದ ಮಡಕೆ, ಕೆಲವು ಮಡಕೆಗಳಲ್ಲಿ ಪುಳಿಯೋಗರೆ, ಕೆಲವುಗಳಲ್ಲಿ ಮೊಸರನ್ನ, ಪೊಂಗಲು. ಪೂಜಾರಿಗಳು ದಿನಚರಿಯ ಕ್ರಮದಂತೆ ಆ ಪಾವನ ಅನ್ನವನ್ನು ವಿಕ್ರಯಿಸತೊಡಗಿದರು. ಜನ ಜೇನಿನಂತೆ

ಮುತ್ತಿಕೊಂಡಿತು. ಹೊರಗಿನಿಂದ ಒಳಗೆ ನುಗ್ಗುವ ಪೂಜಾರಿಗಳ ಬೆಡಗು, ಬಿಂಕ; ಒಳಗಿನಿಂದ ಅನ್ನ ತುಂಬಿದ ಭಾಂಡಗಳನ್ನು ಹೊತ್ತು ಓಡೋಡಿ ಬರುವವರ ಸಡಗರ; ಜಾರಿ ಬಿದ್ದ ಜರತಾರಿ ಮುಗುಟಗಳನ್ನು ಎಳೆದು ಆ ಕಡೆ ಈ ಕಡೆ ಓಡಾಡುವ ನೆವದಿಂದ ಅವುಗಳನ್ನು ಪ್ರದರ್ಶಿಸುತ್ತಿದ್ದ ಅರ್ಚಕವೃಂದ—ಎಲ್ಲವೂ ಒಂದು ವಿಚಿತ್ರವಾಗಿ ಕಂಡಿತು. ನೂರಾರು ಜನ ಯಾತ್ರಿಕರು 'ಗೋವಿಂದ, ಗೋವಿಂದ' ಎಂಬ ಸೊಲ್ಲಿನಿಂದ ಶ್ರೀನಿವಾಸನ ದರ್ಶನಕ್ಕಾಗಿ ತನುಮನಗಳನ್ನು ಬಿಗಿಹಿಡಿದು ಬಿಸಿಲಿನಲ್ಲಿ ಒಣಗುತ್ತಾ ಏಕಮನೋಭಾವದಿಂದ ನಿಂತಿದ್ದರು. ಅಷ್ಟರಲ್ಲಿ ಒಬ್ಬ ಕೃಷ್ಣ ಕಾಯದ ವ್ಯಕ್ತಿ ನನ್ನ ಹತ್ತಿರ ಬಂದು,

"ಎನ್ನ ಸಾಮಿ, ತನಿಯಾಗಿ ಪೋರೆಯಂಗಳ" ಎಂದ.

"ಹಾಗಂದರೇನಯ್ಯ? ಕನ್ನಡ ಬಾರದೆ ನಿನಗೆ?" ಎಂದೆ.

ಆತ ಕುಸು ದೂರದಲ್ಲಿ ನಿಂತಿದ್ದ ಒಬ್ಬ ಅರ್ಚಕನ ಕಡೆ ನೋಡಿದ. ಈತನಿಗೆ ಅವರೇನೋ ಕಣ್ಣು ಸನ್ನೆ ಮಾಡಿದರು. ಈತ ಹೇಳಿದ:

"ಪ್ರವೀಟಾಗಿ ದೇವರನ್ನು ತೋರಿಸ್ತೀವಿ. ತಾವು ತಲಾ ಒಂದಕ್ಕೆ ಒಂದೊಂದು ರೂಪಾಯಿ ಸಂಭಾವನೆ ಕೊಡಬೇಕು."

"ದೇವರನ್ನೇ ತೋರಿಸುತ್ತೀಯಾ?" ಎಂದೆ.

"ಹೌದು, ತಾವು ಏನು ಯೋಚನೆ ಮಾಡ್ಬೇಡಿ, ಆ ವಿಚಾರ." ಎಂದ.

ನನ್ನ ರಕ್ತ ಬಿಸಿಯಾಗತೊಡಗಿತು. ಇಂಥ ಪವಿತ್ರ ಸ್ಥಳದಲ್ಲಿ, ಅದರಲ್ಲೂ ಗರ್ಭಾಂಕಣದ ಮುಂದೆ ಚೌಕಾಶಿ ಮಾಡುತ್ತಾರೆಂದು. ಅಷ್ಟರಲ್ಲಿ ಲಕ್ಷ್ಮಿ, "ಅದೇನು ಸಮಾಚಾರ?" ಎಂದಳು.

"ಈ ಮಹಾನುಭಾವ ದೇವರನ್ನು ತೋರಿಸುತ್ತಾನಂತೆ" ಎಂದೆ. ಆಕೆ ನಕ್ಕಳು. ಅವನ ಕಡೆ ತಿರುಗಿ ನಾನು ಹೇಳಿದೆ:

"ನಾವೇ ಹೋದರೆ ದೇವರ ದರ್ಶನ ಆಗುವುದಿಲ್ಲವೆ?"

"ಕೊಂಚ ಕಷ್ಟಂ ಸಾಮಿ. ಅದೆಲ್ಲಾ ಪೂಜಾರಿಗೆ ಪೆಷಲ್ ಹೇಳಿ ದೊಡ್ಡದಾಗಿ ಆರತಿ ಮಾಡ್ಸಿ ತೋರಿಸ್ತೀವಿ. ಎಷ್ಟೋ ಖರ್ಚು ಮಾಡ್ಕೊಂಡು ದೂರದ ದೇಶದಿಂದ ಬಂದಿದ್ದೀರಿ. ಚಂದಾಗಿ ದೇವರ್‍ನ್ನ ನೋಡ್ದೆ ಹೋದ್ರೆ ಪಾಪ ಅಲ್ವೆ?"

ಅವನ ಪ್ರತಿಯೊಂದು ಮಾತೂ ನನ್ನ ಕೋಪವನ್ನು ಉಕ್ಕಿಸುತ್ತಿತ್ತು.

ನಾನು ಮೂಕನಂತೆ ನಿಂತೆ. ನನ್ನ ಮನಸ್ಸು ವಿಚಾರ ತರಂಗಗಳಿಗೆ ಸಿಕ್ಕಿತು. ಪುಣ್ಯಕ್ಷೇತ್ರವಾದ ದೇವಾಲಯದಲ್ಲಿ ಇಷ್ಟೊಂದು ಕುತಂತ್ರ. ದೇವರ ದರ್ಶನಕ್ಕೆ ದಳ್ಳಾಳಿಗಳು ಬೇರೆ ! ಬಂದಿರುವುದು ಯಾತ್ರೆ. ಇದು ಸಮಯ ವಲ್ಲವೆಂದು ಶಾಂತಿಯನ್ನು ಹೇಗೋ ತಂದುಕೊಂಡು ಹೇಳಿದೆ :

" ನಮಗೆ ಪಾಪ ಬಂದರೂ ಚಿಂತೆ ಇಲ್ಲ. ನೀನು ಈಗ ಹಿಡಿದಿರುವ ಪುಣ್ಯದ ಹಾದಿಯನ್ನೇ ಹಿಡಿ. ನನಗೆ ದೇವರು ಕಣ್ಣು ಕೊಟ್ಟಿದ್ದಾನೆ. ನೀನು ಮೊದಲು ಇಲ್ಲಿಂದ ತೊಲಗು."

ಆ ಕಳ್ಳ ಬೇವಿನಕಾಯಿ ತಿಂದವನ ಹಾಗೆ ಮುಖ ಮಾಡಿಕೊಂಡು ಹೊರಟ. ಅಷ್ಟರಲ್ಲಿ ಒಬ್ಬ ಪೋಲೀಸಿನವನೂ ಮತ್ತಿಬ್ಬರೂ ಅವನ ಜತೆ ಬಿದ್ದು ನಡೆದ ಸಂಗತಿಯನ್ನು ಪಿಸಪಿಸನೆ ಕೇಳುತ್ತಿದ್ದರು. ಅವರೆಲ್ಲರೂ ಒಟ್ಟಾಗಿ ಅನಾಗರೀಕರಂತೆ ಕಾಣುತ್ತಿದ್ದ ಯಾತ್ರಿಕರಲ್ಲಿಗೆ ಹೋಗಿ, ಏನೇನೋ ಸುಳ್ಳು ಹೇಳಿ ದುಡ್ಡು ಕಸಿದುಕೊಂಡು, ಅವರನ್ನು ನಿಂತಿದ್ದ ಸಾಲಿನಿಂದ ಕರೆದುಕೊಂಡು ಗರ್ಭಾಂಕಣಕ್ಕೆ ಹೋದರು. ಅಷ್ಟರಲ್ಲಿ ಒಂದೂವರೆ ಘಂಟೆಯಾಯಿತು. ಈ ವ್ಯಾಪಾರದ ದುಡ್ಡಿನ ಎಣಿಕೆಯೂ ಆಯಿತೆಂದು ಕಾಣುತ್ತದೆ. ಅರ್ಚಕರ ಅಪ್ಪಣೆ ಒಳಗಿನಿಂದ ಬಂದಿತು. ಒಂದು ಫರ್ಲಾಂಗು ದೂರದವರೆಗೂ ಬಳಸಿ ಬಳಸಿ ನಿಂತಿದ್ದ ಜನಸಂದಣಿಯ ಮಾಲೆ ಮೆಲ್ಲನೆ ಚಲಿಸಲಾರಂಭಿಸಿತು. ನನ್ನ ಸ್ನೇಹಿತರು ಕೊಟ್ಟಿದ್ದ ರೂಪಾಯಿಗಳಿಗೆ ಆರತಿಯ ಚೀಟಿಗಳನ್ನು ತೆಗೆದುಕೊಂಡು ಜತೆಯವರೊಡನೆ ಗರ್ಭಾಂಗಣಕ್ಕೆ ನುಗ್ಗಿದೆ. ಸ್ತ್ರೀ ಪುರುಷರೆಂಬ ಭೇದವಿರಲಿಲ್ಲ. ಗರ್ಭಾಂ ಕಣದ ಮಧ್ಯೆ ದಪ್ಪ ದಪ್ಪ ಹಗ್ಗಗಳನ್ನು ಬಿಗಿದು ಎರಡು ಭಾಗ ಮಾಡಿ ದ್ದರು. ಬಲಭಾಗದಿಂದ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ಹೊರಟೆವು. ಶ್ರೀ ವೆಂಕಟೇಶನ ವಿಗ್ರಹ ಐವತ್ತು ಗಜ ದೂರದಲ್ಲಿತ್ತು. ಗೋಡೆಯ ಎರಡು ಪಕ್ಕಗಳಲ್ಲಿಯೂ ಸಣ್ಣ ಸಣ್ಣ ವಿಗ್ರಹಗಳು ಸಾಲುಸಾಲಾಗಿ ನಿಂತು ಹಿಡಿದಿದ್ದ ಪ್ರಣತಿಗಳಲ್ಲಿ ಉರಿಯುತ್ತಿದ್ದ ಎಣ್ಣೆದೀಪಗಳ ಬೆಳಕು ಮಾತ್ರ ಚೆಲ್ಲಿತ್ತು. ವೆಂಕಟೇಶನನ್ನು ಪೂಜಿಸಿದ್ದ ಅಗುರು ಚಂದನಗಳ ಸುವಾಸನೆ ಯೊಡನೆ ಜಾಜಿ, ಮರುಗ, ಮಲ್ಲಿಗೆ, ಸೇವಂತಿಗೆ ಪುಷ್ಪಗಳ ಕಂಪೂ ಸೇರಿ, ಗರ್ಭಾಂಕಣವನ್ನೆಲ್ಲ ತುಂಬಿ ಹೊರಗೆ ಎರಚುತ್ತಿತ್ತು. ಜನರ ಕಂಠದಿಂದ ಹೊರಡುತ್ತಿದ್ದ 'ಗೋವಿಂದ ಗೋವಿಂದ' ಎಂಬ ಒಂದೇ ಒಂದು ಸ್ಮರ ಣೆಯ ಸೊಲ್ಲು ಗರ್ಭಾಂಕಣವನ್ನು ತುಂಬುತ್ತಿತ್ತು. ನಾವು ದೇವದೇವನ

ಶ್ಯಾಮಲ ಮೂರ್ತಿಯ ಮುಂದೆ ನಿಂತೆವು. ನವರತ್ನದ ಆಭರಣಗಳನ್ನೇ ಹೊದ್ದು ನಿಂತಿದ್ದ ಆ ಮಹಾನುಭಾವ. ರತ್ನಖಚಿತವಾದ ದೊಳದ್ದುದ ಕಿರೀಟ ತಲೆಯ ಮೇಲೆ ರಂಜಿಸುತ್ತಿತ್ತು. ಅಗಲವಾದ ಮೂರು ನಾಮಗಳು ಮೂರ್ತಿಯ ಹಣೆಯ ಮೇಲೆ ಸ್ಪಷ್ಟವಾಗಿ ಕಾಣುತ್ತಿದ್ದುವು. ಮೂರ್ತಿ ಮುದ್ದಾಗಿ ಸಜೀವದಂತಿತ್ತು. ತುಲಸಿ ಮಾಲೆಗಳಿಂದಲೂ ಹೂ ಮಾಲೆ ಗಳಿಂದಲೂ ಮುಳುಗಿಹೋಗಿತ್ತು. ರಂಗಸ್ವಾಮಿಯನ್ನು ಮೇಲೆತ್ತಿ ದೇವರ ವಿಗ್ರಹವನ್ನು ತೋರಿಸಿದೆ. ಅನಂತರ ನಾನು ಮನಸ್ಸಿನಲ್ಲೇ ಶ್ರೀ ವೆಂಕಟೇಶ ಮೂರ್ತಿಯ ಪದತಲದಲ್ಲಿ ನನ್ನ ತಲೆಯನ್ನು ತಾಟಿಸಿದೆ. ನಮ್ಮ ಆರತಿ ಯಾದನಂತರ ನಾವು ಮೂವರೂ ಮೆಲ್ಲನೆ ಜಾಗ ಬಿಡಿಸಿಕೊಂಡು ಎಡ ಭಾಗದಿಂದ ಹೊರಬಿದ್ದೆವು. ಗರ್ಭಾಂಕಣದ ಹೊರ ಬಾಗಿಲಿನಲ್ಲಿ ಸ್ವಾಮಿಗೆ ಪೂಜಿಸಿದ್ದ ಪೊಂಗಲನ್ನವನ್ನು ಅರ್ಚಕರು ಪ್ರತಿಯೊಬ್ಬ ಯಾತ್ರಿಕನಿಗೂ ಕೊಡುತ್ತಿದ್ದರು. ಆ ಪಾವನ ಪ್ರಸಾದವನ್ನು ನಾವು ಮೂವರೂ ಕೈಚಾಚಿ ಈಸಿಕೊಂಡೆವು. ನಾನು ಆರು ವರ್ಷಗಳ ಹಿಂದೆ ಹೋಗಿದ್ದಾಗ ಈ ಪದ್ಧತಿ ಇರಲಿಲ್ಲ.

ಕೆಲವು ಧನಿಕರು ಮೋಟಾರುಗಳಲ್ಲಿ ಸಂಸಾರವನ್ನೇ ತುಂಬಿಕೊಂಡು ಬಂದು, ಪೊಲೀಸರ ಸಿಬ್ಬಂದಿಯನ್ನು ತೆಗೆದುಕೊಂಡು ದೇವರ ದರ್ಶನಕ್ಕೆ ಹೋಗುತ್ತಿದ್ದರು. ಶ್ರೀಮಂತರ ಸ್ತ್ರೀಯರು ಗರ್ಭಾಂಕಣವನ್ನು ತಲಪು ವಾಗಲೂ ತಾವು ಮುಡಿದಿದ್ದ ಹೂಮಾಲೆಯನ್ನು ಸರಿಪಡಿಸಿಕೊಳ್ಳುತ್ತಲೂ ಸೀರೆಯ ಸೆರಗನ್ನೂ ನೆರಿಯನ್ನೂ ನೋಡಿಕೊಳ್ಳುತ್ತಲೂ ವೈಯಾರದಿಂದ ಒಳಗೆ ನುಗ್ಗುತ್ತಿದ್ದರು. ಗರ್ಭಾಂಕಣದಿಂದ ಹೊರಬರುವ ವೇಳೆಗೆ ಅವರು ಮುಖವೆಲ್ಲಾ ಬೆವರಿನಿಂದ ತೊಯ್ದು ಏದುತ್ತಿದ್ದರು. ಗರ್ಭಾಂಕಣದ ಒಳ ಗಡೆ ಇದ್ದಾಗ ಆ ಕುಸುಮ ಕೋಮಲೆಯರಿಗೆ ಪುನರ್ಜನ್ಮ ಕಂಡಿರಬೇಕು. ಬಡ ಜನರ ಹೆಂಗಸರೂ ಮಕ್ಕಳೂ ಗರ್ಭಾಂಕಣದ ಎದುರು ಒದ್ದೆ ಬಟ್ಟೆ ಯಲ್ಲೇ ನೆಲದ ಮೇಲೆ ಉರುಳುಸೇವೆ ಮಾಡುತ್ತಿದ್ದರು. ಅದೊಂದು ತರಹ ಭಕ್ತಿ.

ನಾವು ತೆಗೆದುಕೊಂಡು ಹೋಗಿದ್ದ 'ಚಿನ್ನದ ನಾಲಗೆ' ಮತ್ತು ದುಡ್ಡಿನ ಮುಡುಪನ್ನು ದೇವರ ಕಣಜಕ್ಕೆ ಹಾಕಿ ಅದಕ್ಕೂ ಪ್ರದಕ್ಷಿಣೆ ಮಾಡಿ ದೆವು. ಕೆಲವು ಸ್ತ್ರೀಯರು ತಮ್ಮ ಚಿನ್ನದ ಬಳೆಗಳನ್ನೂ ಕಿವಿಯೋಲೆ ಗಳನ್ನೂ ಕಣಜಕ್ಕೆ ಹಾಕಿ ಪ್ರದಕ್ಷಿಣೆ ಮಾಡುತ್ತಿದ್ದುದನ್ನು ಲಕ್ಷ್ಮಿ ಕಣ್ಣರಳಿಸಿ

ಕೌತುಕದಿಂದ ನೋಡುತ್ತಿದ್ದಳು. ಎಂತಹ ತ್ಯಾಗಮಯ ಬಾಳನ್ನು ಕ್ಷಣ ಕಾಲ ನಡೆಸಿದರು ಜನ ಅಲ್ಲಿ! ಎನ್ನಿಸಿತು ನನಗೆ. ಮನುಷ್ಯರು ತಮ್ಮ ದಿನ ಚರಿಯ ಕರ್ಮದಲ್ಲಿ ಹೀಗೇಕಿರಬಾರದು? ಹಳಸಿದ ಅನ್ನವನ್ನೂ ನಾಯಿ ನರಿಗಳಿಗೆ ಹಾಕದ ಮಾನವನು ದುಡ್ಡು, ಚಿನ್ನ ಬೆಳ್ಳಿಯ ಒಡವೆಯನ್ನೇ ಕಣಜಕ್ಕೆ ಸುರಿಯುತ್ತಿದ್ದಾನೆ. ಏನು ದೈವಮಾಯೆ ಇದು! ಶ್ರೀನಿವಾಸನು ಯಾತ್ರಿಕರ ಹೃದಯದಲ್ಲಿ ಕ್ಷಣ ಕಾಲವಾದರೂ ಎಂಥ ಪವಾಡವನ್ನುಂಟು ಮಾಡಿದ್ದಾನೆ!

ದೇವಸ್ಥಾನದ ಮುಂಭಾಗದಲ್ಲಿದ್ದ ಅಂಗಡಿಯಲ್ಲಿ ತೀರ್ಥ ತುಂಬಿದ ಚೆಂಬನ್ನು ಕೊಂಡೆವು. ಲಕ್ಷ್ಮಿ ತಿರುಪತಿಯ ಜ್ಞಾಪಕಾರ್ಥವಾಗಿ ಎರಡು ಲೋಟಗಳನ್ನೂ ಎರಡು ಚೆಂಬುಗಳನ್ನೂ ಕೊಂಡಳು. ಅನಂತರ ನಮ್ಮ ಕೊಠಡಿಗೆ ಹೋದೆವು. ಬಟ್ಟೆ ಬರೆ ಬದಲಾಯಿಸಿಕೊಂಡು ಭೋಜನ ಶಾಲೆ ಯೊಂದರಲ್ಲಿ ಊಟ ಮುಗಿಸಿ ಬಂದೆವು. ನಮ್ಮ ರಂಗಸ್ವಾಮಿ ಮತ್ತೆ ಪ್ರಾರಂಭ ಮಾಡಿದ:

"ಅಷ್ಟು ದೊಡ್ಡ ಗರುಡಗಂಬ ಯಾರಪ್ಪ ಮಾಡಿದರು?"

"ಯಾರೋ ಭಕ್ತರು ಹಿಂದಿನ ಕಾಲದಲ್ಲಿ ಮಾಡಿಸಿದ್ದಾರೆ."

"ದೇವರನ್ನು ಯಾತರಿಂದ ಮಾಡಿದ್ದಾರೆ; ಕಪ್ಪಗೇಕಿದೆ?"

"ಯಾರಿಗೆ ಗೊತ್ತಪ್ಪ. ಹಿಂದಿನ ಕಾಲದಲ್ಲಿ ಯಾರೊ ಭಕ್ತರು ಮಾಡಿದ್ದಾರೆ."

"ಇಷ್ಟೊಂದು ಅನ್ನ ದೇವರಿಗೆ ಏಕೆ ಮಾಡ್ತಾರೆ? ದೇವರು ಊಟ ಮಾಡ್ತಾನೆಯೆ?"

"ದೇವರಿಗೆ ಪೂಜೆ ಮಾಡಿ, ಆ ಅನ್ನವನ್ನು ಯಾತ್ರಿಕರಿಗೆ ಕೊಡುತ್ತಾರೆ" ಎಂದು ಹುಡುಗನ ಬಾಯಿ ಮುಚ್ಚಿಸಿದೆ. ಇಲ್ಲದಿದ್ದರೆ ಇಂತಹ ಪ್ರಶ್ನೆಗಳಿಗೆ ಉತ್ತರ ಹೇಳುವುದು ಸಾಮಾನ್ಯನಾದ ನನ್ನಿಂದ ಸಾಧ್ಯವೇ?

ನಾವು ಕೊಠಡಿಯಿಂದ ಹೊರಬಂದು ಊರನ್ನು ಒಂದು ಸುತ್ತು ಸುತ್ತಿದೆವು. ದೇವಸ್ಥಾನದ ಕಟ್ಟಡವನ್ನು ನೋಡುತ್ತ ಒಳಗೆ ಹೋದೆವು. ಕೈಸಾಲೆಯಲ್ಲಿದ್ದ ಪಟ್ಟಿಯನ್ನು ರಂಗಸ್ವಾಮಿ ಓದಿದ.

"ಬ್ರಹ್ಮೋತ್ಸವ ಎರಡು ವಿಧವಾಗಿದೆ. ಒಂದಕ್ಕೆ ೧೫೦೦ ರೂಪಾಯಿ ಕೊಡಬೇಕು. ಎರಡನೆಯದಕ್ಕೆ ೭೫೦ ರೂಪಾಯಿ ಕೊಡಬೇಕು. ವಸಂತೋತ್ಸವ ಮಾಡಿಸಬೇಕಾದರೆ ೨೦೦೦ ರೂಪಾಯಿ. ಕಲ್ಯಾಣೋತ್ಸ

ವಕ್ಕೆ ೫೦೦ ರೂಪಾಯಿ. ವಜ್ರಕವಚದ ಉತ್ಸವಕ್ಕೆ ೭೨ ರೂಪಾಯಿ. ವಜ್ರ ಕವಚವಿಲ್ಲದೆ ಬೆಳ್ಳಿ ಗರುಡವಾಹನಗಳಿಗೆ ೩೨ ರೂಪಾಯಿ.

## ಶ್ರೀ ವೆಂಕಟೇಶನ ಸೇವೆಗಳು

ಪ್ರಾತಃಕಾಲದಲ್ಲಿ ವಿಶ್ವರೂಪದರ್ಶನ–ಹತ್ತು ಘಂಟೆಗೆ ತೋಮಲ ಸೇವೆ; ಮಧ್ಯಾಹ್ನ ಒಂದು ಘಂಟೆಗೆ ಧರ್ಮ ದರ್ಶನ–ಸಾಯಂಕಾಲ ತೋಮಲ ಸೇವೆ; ರಾತ್ರಿ ಘಂಟಾದರ್ಶನ ಮತ್ತು ಕೊನೆಯಲ್ಲಿ ಏಕಾಂತ ಸೇವೆ. ಪ್ರತಿಗುರುವಾರ ರಾತ್ರಿ ಪುಷ್ಪಕವಚ ಸೇವೆಯೂ ಪ್ರತಿ ಶುಕ್ರವಾರದಲ್ಲಿ ಅಭಿಷೇಕವೂ ನಡೆಯುತ್ತವೆ.

ಕರ್ಪೂರದಆರತಿ, ಅಭಿಷೇಕ ದರ್ಶನ ಮತ್ತು ಪುಷ್ಪಕವಚದರ್ಶನ ಗಳಿಗೆ ಒಂದು ರೂಪಾಯಿ ಕೊಡಬೇಕು. ಹದಿಮೂರು ರೂಪಾಯಿ ಕೊಟ್ಟು ಏಕಾಂತ ಸೇವೆ ಮತ್ತು ತೋಮಲ ಸೇವೆಗಳಿಗೆ ಐದು ಜನರು ಹೋಗ ಬಹುದು. ಅರ್ಚನೆಗಳಿಗೆ ೭ ರೂಪಾಯಿ ಕೊಟ್ಟು ಒಟ್ಟಿಗೆ ನಾಲ್ಕು ಜನರು ದರ್ಶನ ಮಾಡಬಹುದು.

ಯಾತ್ರಿಕರು ಪ್ರತ್ಯೇಕವಾಗಿ ಈ ಸೇವೆಗಳನ್ನು ತಾವೇ ಮಾಡಿಸುವು ದಾದರೆ, ಪುಷ್ಪಕವಚಕ್ಕೆ ೬೦ ರೂಪಾಯಿ, ಕನ್ನಡಿ ಅರಮನೆಗೆ ೬೧ ರೂಪಾಯಿ, ಆಮಂತ್ರಣೋತ್ಸವಕ್ಕೆ ೧೦೦ ರೂಪಾಯಿ, ಅರ್ಧ ತಿರುವಾನಡ ೧೦೦ ರೂ, ಪೂರ್ತಿ ತಿರುವಾನಡ ೨೦೦೦ ರೂಪಾಯಿ, ಸಹಸ್ರ ಕಲಶಾಭಿ ಷೇಕ ೧೫೦೦ ರೂಪಾಯಿ ಕೊಡಬೇಕು.

"ಯಾಕಪ್ಪಾ, ಇಷ್ಟೊಂದು ದುಡ್ಡು ಕೊಡಬೇಕು? ದೇವರ ಸೇವೆ ಗೇಕೆ ದುಡ್ಡು? ೧೦೦೦ ರೂಪಾಯಿ ೨೦೦೦ ರೂಪಾಯಿ ಕೊಡಬೇಕೆಂದು ಬರೆದಿದೆಯಲ್ಲಾ!" ಎಂದ ರಂಗಸ್ವಾಮಿ.

"ಮನುಷ್ಯರಿಗೆ ಖಾಯಿಲೆಯಾದಾಗ ಮತ್ತು ಕಷ್ಟ ಸಂಭವಿಸಿದಾಗ ದೇವರಿಗೆ ಹರಕೆ ಮಾಡಿಕೊಳ್ಳುತ್ತಾರೆ, ಉತ್ಸವ ಮಾಡಿಸುತ್ತೇವೆಂದು. ಆದರಿಂದ ಅವರ ಕಷ್ಟಗಳು ಪರಿಹಾರವಾಗುತ್ತವೆ. ದೇವರ ಉತ್ಸವದ ಖರ್ಚಿಗೆ ದುಡ್ಡು ಬೇಡವೆ? ಈ ಛತ್ರಗಳನ್ನೆಲ್ಲಾ ಯಾತ್ರಿಕರಿಂದ ಬರುವ ದುಡ್ಡಿನಿಂದಲೇ ಕಟ್ಟಿಸಿದ್ದಾರೆ. ಬೆಟ್ಟದ ಮೇಲಕ್ಕೆ ಮೋಟಾರು ರಸ್ತೆಯನ್ನು ಡಾಮರು ಹಾಕಿ ಮಾಡಿಸಿದ್ದಾರೆ. ಅದಕ್ಕೆ ನಾಲ್ಕೈದು ಲಕ್ಷ ರೂಪಾಯಿ ಖರ್ಚಾಗಿದೆ" ಎಂದೆ.

ದೇವಸ್ಥಾನದಿಂದ ಹೊರಬಂದು ಪಕ್ಕದಲ್ಲಿದ್ದ ಪುಷ್ಕರಣಿಯ ಕಡೆ ಹೋದೆವು.

" ಇದೇಕಪ್ಪಾ, ಕೊಳವನ್ನು ಕಟ್ಟಿಸಿದ್ದಾರೆ ? ಇದಕ್ಕೇನು ಹೆಸರು ? " ಎಂದ ರಂಗಸ್ವಾಮಿ.

" ಸುಮ್ಮನೆ ನೋಡೋ " ಎಂದೆ. ಅವನ ತಾಯಿ ಮಧ್ಯೆ ಬಾಯಿ ಹಾಕಿ " ಹೇಳಿ, ಹುಡುಗ ತಿಳಿದುಕೊಳ್ಳಲಿ. ಈ ಕಲ್ಯಾಣಿ ವಿಚಾರ ನಾನೂ ತಿಳಿದುಕೊಳ್ಳಬೇಕು " ಎಂದಳು.

" ಇದು ಸ್ವಾಮಿಯ ಪುಷ್ಕರಣಿ. ಸರಸ್ವತೀನದಿ ಪುಲಸ್ತ್ಯಬ್ರಹ್ಮನ ಶಾಪದ ಮಹಿಮೆಯಿಂದ ಪ್ರವಾಹರೂಪವನ್ನು ಕಳೆದುಕೊಂಡು ಈ ಸರೋವರರೂಪವನ್ನು ಹೊಂದಿದ್ದಾಳೆಂದು ಪುರಾಣಪ್ರಸಿದ್ಧಿಯಾಗಿದೆ."

ಅಲ್ಲಿಂದ ನೆಟ್ಟಗೆ ಪಾಂಡವ ತೀರ್ಥಕ್ಕೆ ಹೊರಟೆವು. ದೇವಸ್ಥಾನದಿಂದ ಈಶಾನ್ಯ ದಿಕ್ಕಿಗೆ ಒಂದು ಮೈಲಿ ದೂರ ಕಾಡುಹಾದಿಯಲ್ಲಿ ಹೋದೆವು. ನಾಲ್ಕು ಐದು ಜನರು ಮಾತ್ರ ಅಲ್ಲಿಗೆ ಸ್ನಾನಕ್ಕೆ ಬಂದಿದ್ದರು. ನಾವು ಅಲ್ಲಿ ಸ್ನಾನವನ್ನು ಮುಗಿಸಿಕೊಂಡು ತಕ್ಷಣ ಹಿಂದಿರುಗಿದೆವು. ಪಾಂಡವರು ತಮ್ಮ ರಾಜ್ಯವನ್ನು ಕಳೆದುಕೊಂಡು ವೆಂಕಟಾಚಲಕ್ಕೆ ಬಂದು ಈ ಘಟ್ಟದಲ್ಲಿ ತಪಸ್ಸು ಮಾಡಿದರಂತೆ ಅದರ ಪ್ರಭಾವದಿಂದ ಶತ್ರುಗಳನ್ನು ಜಯಿಸಿ ಪುನಃ ರಾಜ್ಯವನ್ನು ಹೊಂದಿದರಂತೆ ! ಇಲ್ಲಿ ಪಂಚಪಾಂಡವರ ವಿಗ್ರಹಗಳಿವೆ.

ರಂಗಸ್ವಾಮಿ ಪಂಚಪಾಂಡವರ ವಿಗ್ರಹಗಳನ್ನು ನೋಡಿ ಕೇಳಿದ :

" ಪಾಂಡವರು ರಾಜ್ಯವನ್ನು ಏತಕ್ಕೆ ಕಳೆದುಕೊಂಡರು ? ಇಲ್ಲೆಲ್ಲಾ ಏಕೆ ಬಂದಿದ್ದರು ?" ಎಂದು.

" ಪಾಂಡವರೂ ಕೌರವರೂ ದಾಯಾದಿಗಳು. ಕೌರವರಲ್ಲಿ ದುರ್ಯೋಧನ ಬಹಳ ಪರಾಕ್ರಮಿಯಾಗಿದ್ದ. ಪಾಂಡವರಲ್ಲಿ ಭೀಮನೂ ಅರ್ಜುನನೂ ಶೂರರು. ಚಿಕ್ಕಂದಿನಿಂದಲೂ ಪಾಂಡವರಲ್ಲಿ ದುರ್ಯೋಧನನಿಗೆ ದ್ವೇಷ ಬೆಳೆದು ಬಂದು ಅವರಿಗೆ ಒಂದು ಎಳ್ಳುಮೊನೆಯಷ್ಟು ರಾಜ್ಯವನ್ನು ಕೊಡಬಾರದೆಂದು ಯೋಚಿಸಿ, ಒಂದು ಅರಗಿನ ಮನೆಯನ್ನು ಕಟ್ಟಿಸಿ, ಅವರನ್ನು ಅಲ್ಲಿರಿಸಿದನು. ಒಂದು ದಿನ ರಾತ್ರಿ ಪಾಂಡವರನ್ನು ಸುಟ್ಟುಬಿಡಬೇಕೆಂದು ಆ ಅರಗಿನ ಮನೆಗೆ ಬೆಂಕಿ ಹಚ್ಚಿಸಿದನು. ದುರ್ಯೋಧನನ ಈ ಕುತಂತ್ರವನ್ನು ಮೊದಲೇ ತಿಳಿದಿದ್ದ ಪಾಂಡವರು ಅರಮನೆಯ ನೆಲಮಾಳಿಗೆಯಿಂದ ಒಂದು ಸುರಂಗಮಾರ್ಗವನ್ನು ಮಾಡಿಸಿ ಅದರ

ಮುಖಾಂತರ ಅದಕ್ಕೆ ಬೆಂಕಿ ಬೀಳುವುದಕ್ಕೆ ಮೊದಲೇ ಹೊರಬಂದು, ಹನ್ನೆರಡು ವರ್ಷಗಳ ಕಾಲ ವೇಷ ಮರಸಿಕೊಂಡು ಕಾಲಕಳೆದರು. ಆ ಕಾಲದಲ್ಲಿ ಇಲ್ಲಿ ಬಂದು ತಪಸ್ಸು ಮಾಡಿರಬೇಕು."

" ದುರ್‍ಯೋಧನನಿಗೆ ಹೆದರಿಬಿಟ್ಟನೆ ಭೀಮ ? ಪಾಂಡವರು ಆಗಲೆ ಯುದ್ಧ ಮಾಡಬಹುದಾಗಿತ್ತಲ್ಲ ? "

" ಭೀಮನು ಹೆದರಲಿಲ್ಲ ; ಅವನು ಬಹಳ ಬಲಿಷ್ಠನು. ಕೌರವನೂ ಕೂಡ ಭೀಮನಿಗೆ ಸರಿಸಮನಾದ ಪರಾಕ್ರಮಿ. ಪಾಂಡವರಿಗೆ ಆಗ ಸರಿಯಾದ ಬೆಂಬಲವಿರಲಿಲ್ಲ. ಅದೂ ಅಲ್ಲದೆ, ಧರ್ಮರಾಯ ಧರ್ಮನಿಷ್ಠನಾದುದರಿಂದ ದಾಯಾದಿಗಳ ಹತ್ತಿರವಿದ್ದರೆ ಶತ್ರುತ್ವ ದಿನೇ ದಿನೇ ಹೆಚ್ಚುತ್ತದೆಂದು ಅಜ್ಞಾತವಾಸವನ್ನು ಕೈಗೊಂಡ."

" ಹಾಗಾದರೆ ಕೌರವರನ್ನು ಹೇಗೆ ಸೋಲಿಸಿದ ? "

" ಶ್ರೀಕೃಷ್ಣನು ಪಾಂಡವರಿಗೆ ಐದು ಗ್ರಾಮಗಳನ್ನಾದರೂ ಕೊಡಬೇಕೆಂದು ದುರ್‍ಯೋಧನನನ್ನು ಬೇಡಿಕೊಂಡರೂ ಕೊಡಲಿಲ್ಲ. ಸರಿ. ಕುರುಕ್ಷೇತ್ರ ಯುದ್ಧ ಇಬ್ಬರಿಗೂ ನಡೆಯಿತು. ಅಲ್ಲಿ ಅನೇಕ ಲಕ್ಷ ಸೈನಿಕರು ಮೃತಪಟ್ಟರು. ಕೊನೆಗೆ ಭೀಮನಿಗೂ ಕೌರವನಿಗೂ ಭಯಂಕರವಾದ ಗದಾಯುದ್ಧ, ಮುಷ್ಟಿಯುದ್ಧ ನಡೆಯಿತು. ಕೌರವನು ಭೀಮನ ಪೆಟ್ಟು ತಡೆಯಲಾರದೆ ವೈಶಂಪಾಯನ ಕೊಳದಲ್ಲಿ ಅಡಗಿಕೊಂಡನು. ಭೀಮನ ಹೆಸರು ಕೇಳಿದರೆ ನೀರಿನಲ್ಲಿಯೂ ಬೆವರುತ್ತಿದ್ದನು. ಆ ಕೊಳದ ಹತ್ತಿರ ಪುನಃ ಗದಾಯುದ್ಧ ಭೀಮನಿಗೂ ಕೌರವನಿಗೂ ನಡೆಯಿತು. ಶ್ರೀಕೃಷ್ಣನು ಕೌರವನ ತೊಡೆಗೆ ಹೊಡೆಯುವಂತೆ ಭೀಮನಿಗೆ ಸನ್ನೆಮಾಡಿದನು. ಆಗ ಭೀಮ ಬಲವಾಗಿ ಕೌರವನ ತೊಡೆಯನ್ನು ಗದೆಯಿಂದ ಹೊಡೆದು ಕೊಂದನು."

ಈ ಉತ್ತರದಿಂದ ರಂಗಸ್ವಾಮಿಗೆ ಸಮಾಧಾನವಾಯಿತೊ ಇಲ್ಲವೊ ! ಅವನು ಸುಮ್ಮನಾಗಿ ಮುಂದಕ್ಕೆ ಹೋಗೋಣವೆಂದ. ನಾವು ಆಕಾಶಗಂಗೆಗೂ ವೈಕುಂಠ ತೀರ್ಥಕ್ಕೂ ಹೋದೆವು. ಆಕಾಶಗಂಗೆಯ ತೀರ್ಥ ದೇವಸ್ಥಾನದ ಉತ್ತರಕ್ಕೆ ಎರಡು ಮೈಲಿ ದೂರದಲ್ಲಿದೆ. ದಟ್ಟವಾದ ಕಾಡಿನಲ್ಲಿ ಹಾದಿ ಹರಿದಿದೆ. ಆಕಾಶಗಂಗೆ ತೀರ್ಥ ಎರಡು ಫರ್ಲಾಂಗು ದೂರ ಇರುವಾಗಲೇ ಬೆಟ್ಟ ಕಡಿದಾಗುತ್ತಾ ಬರುತ್ತದೆ. ನಾವು ಮೆಟ್ಟಲುಗಳನ್ನು ಬಹು ಎಚ್ಚರಿಕೆಯಿಂದ ಇಳಿಯುತ್ತಾ ಹೋದೆವು. ಅಕ್ಕಪಕ್ಕದ ಕಣಿವೆ

ಗಳಲ್ಲಿ ಕೊಬ್ಬಿ ಬೆಳೆದಿದ್ದ ಹೆಮ್ಮರಗಳ ಗುಂಪು ಬಹು ಭೀಷಣವಾಗಿತ್ತು. ನಾವು ಇಳಿದು ಇಳಿದು ಆಕಾಶಗಂಗೆಯು ಬೀಳುವಲ್ಲಿಗೆ ಬಂದೆವು. ಎಲ್ಲಿಂದಲೋ ಒಂದು ದೊಡ್ಡ ಬಂಡೆಯ ಮಧ್ಯದಿಂದ ಸ್ವಚ್ಛವಾದ ನೀರು ಧಾರೆ ಧಾರೆಯಾಗಿ ಹರಿದು, ಅಲ್ಲಿನ ಮಟ್ಟಸವಾದ ಪ್ರದೇಶದಿಂದ ಕೆಳಗಿನ ಕಮರಿಗೆ ಬೀಳುತ್ತದೆ. ನಾವು ಮೂವರು ಅಲ್ಲಿ ಮಿಂದು ತುಸುಹೊತ್ತು ಬಟ್ಟೆಬರೆ ಆರಿಸಿಕೊಂಡು ನಂತರ ಹಿಂದಿರುಗಿದೆವು. ತಿರುಮಲನಂಬಿ ಎಂಬ ಭಕ್ತನಿಗೋಸ್ಕರ ಶ್ರೀ ಶ್ರೀನಿವಾಸನೆ ಈ ತೀರ್ಥ ನಿರ್ಮಾಣ ಮಾಡಿದ್ದಾನೆ. ಈ ನೀರನ್ನು ಪ್ರತಿದಿನವೂ ಸ್ವಾಮಿಯ ಅಭಿಷೇಕಕ್ಕೆ ತರುತ್ತಾರೆ. ಚೈತ್ರ ಮಾಸದ ಪೌರ್ಣಮಿಯ ದಿನ ನೂರಾರು ಜನರು ಸ್ನಾನಕ್ಕೆ ಹೋಗುತ್ತಾರೆ.

ದೇವಸ್ಥಾನಕ್ಕೆ ಎರಡು ಮೈಲಿ ದೂರದಲ್ಲಿ, ವೈಕುಂಠತೀರ್ಥ ದಟ್ಟವಾದ ಕಾಡಿನಲ್ಲಿದೆ. ಅಲ್ಲಿ ಒಂದು ದೊಡ್ಡ ಬಿಲ ಇದೆ. ಆದಕ್ಕೆ ವೈಕುಂಠ ಗುಹೆ ಎಂದು ಹೆಸರು. ಶ್ರೀರಾಮಚಂದ್ರನು ಸೀತಾದೇವಿಯನ್ನು ಕಳೆದು ಕೊಂಡು ರಾವಣನ ವಧೆಗಾಗಿ ಆಂಜನೇಯ, ನಳ, ನೀಲ, ಜಾಂಬವ, ಸುಗ್ರೀವ ವೊದಲಾದ ವಾನರ ವೀರರೊಡನೆ ಶ್ರೀವೆಂಕಟಾಚಲದ ಮಾರ್ಗ ವಾಗಿ ಬಂದನು. ಆಕಾಶಗಂಗೆಯ ಸಮೀಪದಲ್ಲಿ ತಪಸ್ಸು ಮಾಡುತ್ತಿದ್ದ ಅಂಜನಾದೇವಿ ಶ್ರೀರಾಮನನ್ನು ನೋಡಿ ವೆಂಕಟಾದ್ರಿಗೆ ಬರಬೇಕೆಂದು ಬೇಡಿಕೊಂಡಳು. ಆಂಜನೇಯನೂ ಕೂಡ ತನ್ನ ತಾಯಿಯ ಪ್ರಾರ್ಥನೆ ಯನ್ನು ಸ್ವೀಕರಿಸಬೇಕೆಂದು ಕೈಮುಗಿದು ಬೇಡಿಕೊಂಡನು. ದಶರಥ ರಾಮನು ಇವರ ಪ್ರಾರ್ಥನೆಯನ್ನು ಸ್ವೀಕರಿಸಿ ವೆಂಕಟಾಚಲಕ್ಕೆ ಬಂದನು. ಆಗ ಆ ಕ್ಷೇತ್ರದಲ್ಲಿದ್ದ ಮುನಿಗಳೆಲ್ಲರೂ ಶ್ರೀರಾಮನ ದರ್ಶನವನ್ನು ಪಡೆದರು. ಶ್ರೀರಾಮ ಲಕ್ಷ್ಮಣರು ಆಕಾಶಗಂಗೆಯ ತೀರ್ಥದಲ್ಲಿ ಮಿಂದು ನಿಂತಿರಲು ಅಂಜನಾದೇವಿ ಫಲಪುಷ್ಪಗಳನ್ನು ತಂದು ಅರ್ಪಿಸಿದಳು. ಆಂಜನೇಯನು ಅನೇಕ ಮಧುರ ಫಲಗಳನ್ನೂ ಜೇನುತುಪ್ಪವನ್ನೂ ತಂದು ಶ್ರೀರಾಮನಿಗೆ ಅರ್ಪಿಸಿದನು. ಶ್ರೀರಾಮನು ಅದನ್ನು ತನ್ನ ಪರಿವಾರಕ್ಕೆಲ್ಲ ಹಂಚಿ ತಾನೂ ತಿಂದನು. ಕಪಿಗಳೆಲ್ಲ ಸ್ವೇಚ್ಛೆಯಾಗಿ ವಿಹರಿಸುತ್ತ ವೈಕುಂಠ ಗುಹೆಯೊಳಕ್ಕೆ ನುಗ್ಗಿದವು. ನವರತ್ನ ಖಚಿತವಾದ ಗೋಪುರಗಳೂ ಪ್ರಾಕಾರಗಳೂ ಮಾಣಿಕ್ಯ ಮುತ್ತುಗಳಿಂದ ಕೆತ್ತಿದ ಮಂಟಪಗಳೂ ರಮಣೀಯವಾದ ಉದ್ಯಾನವನಗಳಲ್ಲಿ ನಿರ್ಮಿಸಿದ ಅರಮನೆಗಳೂ ಬೀದಿ ಬೀದಿಗಳಲ್ಲಿ ತಳಿರು ತೋರಣಗಳಿಂದಲಂಕೃತವಾಗಿದ್ದ ಸಾವಿರಾರು ಹೇಮರಥಗಳೂ ಅಲ್ಲಿ

ಗೋಚರಿಸಿದುವು.

ರತ್ನ ಖಚಿತವಾದ ರಥವೆಂದರಲ್ಲಿ ಶಂಖ ಚಕ್ರ ಗದಾಪದ್ಮಗಳನ್ನು ಧರಿಸಿ ಲಕ್ಷ್ಮೀಪತಿ ಕುಳಿತಿದ್ದನು. ಇದೆಲ್ಲವೂ ರಾವಣನ ಮಾಯೆಯೆಂದು ಅರಿತ ವಾನರರು ಓಡಿ ಬಂದು ಶ್ರೀರಾಮಚಂದ್ರನಿಗೆ ತಾವು ಕಂಡ ವಿಚಿತ್ರವನ್ನು ಬಿನ್ನೈಸಿದರು. ಶ್ರೀರಾಮಚಂದ್ರನು 'ನೀವೇ ಧನ್ಯರು. ವೈಕುಂಠ ವಾಸಿಯು ನಿಮಗೆ ದರ್ಶನವಿತ್ತಿದ್ದಾನೆ. ಈ ಗುಹೆಯ ಮಹಿಮೆ ಯನ್ನು ವರ್ಣಿಸಲಸಾಧ್ಯ' ಎಂದನು. ಅನಂತರ ಬೆಟ್ಟವನ್ನು ಇಳಿದು ರಾವಣನ ವಧೆಗಾಗಿ ಲಂಕೆಗೆ ಹೊರಟನು. ಶ್ರೀ ಮಹಾವಿಷ್ಣುವು ವೈಕುಂಠ ಲೋಕವನ್ನು ಆ ಗುಹೆಯಲ್ಲಿ ಕಪಿಗಳಿಗೆ ತೋರಿಸಿದ್ದರಿಂದ ಆ ಗುಹೆಗೆ 'ವೈಕುಂಠಗುಹೆ' ಎಂದು ಹೆಸರು ಬಂತು.

ಚಕ್ರತೀರ್ಥ, ತೊಟ್ಟತೀರ್ಥ, ವರಜಾನದಿ ತೀರ್ಥ, ನಾಗತೀರ್ಥ, ರಾಮಕೃಷ್ಣ ತೀರ್ಥ, ಸನಕ ಸುನಂದ ತೀರ್ಥ, ಗೋಗರ್ಭತೀರ್ಥ ಎಂಬುವು ತಿರುಪತಿಯಲ್ಲಿನ ಇತರ ತೀರ್ಥಗಳಲ್ಲಿ ಮುಖ್ಯವಾದುವುಗಳು.

ನಾವು ಇಳಿದುಕೊಂಡಿದ್ದ ಕೊಠಡಿ ಎರಡನೆ ಅಂತಸ್ತಿನದು. ಆ ಛತ್ರದ ಸುತ್ತಲೂ ದುರ್ವಾಸನೆ ಎರಚುತ್ತಿತ್ತು. ಕೆಳ ಕೊಠಡಿಗಳಲ್ಲಿದ್ದ ಯಾತ್ರಿಕರು ಹೇಗೆ ಕಾಲ ಕಳೆಯುತ್ತಿದ್ದರೊ ಆ ವೆಂಕಟೇಶನಿಗೇ ಗೊತ್ತು! ಆ ಕೊಠಡಿಗಳೊಂದಕ್ಕೂ ದೀಪವಿರಲಿಲ್ಲ. ನೀರಿಗಂತೂ ಅದೆಲ್ಲಿ ಹೋಗ ಬೇಕೊ?—ನಮಗೆ ಒಂದೂ ಅರ್ಥವಾಗಲಿಲ್ಲ.

ಸಾಯಂಕಾಲದಲ್ಲಿ ಒಂದೆರಡು ಫರ್ಲಾಂಗು ದೂರ ಹೋಗಿ ಆ ವೆಂಕ ಟಾದ್ರಿ ಗಿರಿಯಲ್ಲಿ ಸುತ್ತಿದೆವು. ಸೂರ್ಯನು ಮೆಲ್ಲಮೆಲ್ಲನೆ ಪಡುವಣ ದಿಗಂತದಲ್ಲಿ ಒಂದು ಗಿರಿಯಾಚೆ ಇಳಿದನು. ಓಕಳಿ ಬಣ್ಣ ಆ ಗಿರಿ ಕಾನನ ದಲ್ಲೆಲ್ಲಾ ತುಸು ಹೊತ್ತು ಚೆಲ್ಲಾಡಿತು. ಕಾಡಿನ ಪುಷ್ಪಗಳನ್ನು ಮುತ್ತಿಟ್ಟು ಬರುತ್ತಿದ್ದ ತಂಗಾಳಿ ಮನಸ್ಸನ್ನು ಉಲ್ಲಾಸಗೊಳಿಸುತ್ತಿತ್ತು. ಅನಂತರ ನಿಶೆ ನಿಧಾನವಾಗಿ ಆ ವನರಾಜಿಯ ಮೇಲೆ ತನ್ನ ಸೆರಗನ್ನು ಬೀಸತೊಡಗಿ ದಳು. ನಾವು ಕಣ್ಣುಬೆಳಕು ಇದ್ದಾಗಲೆ ನಮ್ಮ ಕೊಠಡಿಯನ್ನು ಸೇರಿ ಕೊಂಡೆವು. ಆ ರಾತ್ರಿಯನ್ನು ಅಲ್ಲಿ ಕಳೆದು, ಮಾರನೆ ಬೆಳಗ್ಗೆ ಸ್ವಾಮಿ ಪುಷ್ಕರಣಿಯಲ್ಲಿ ಮಿಂದು ಮಧ್ಯಾಹ್ನದ ದರ್ಶನವನ್ನು ಪುನಃ ಪಡೆದೆವು. ನಾಲ್ಕು ಘಂಟೆಗೆ ನಮ್ಮ ಗಂಟನ್ನು ಕಟ್ಟಿಕೊಂಡು ಕೆಳಗಡೆ ಹೋಗುವ ಬಸ್ಸಿ ಗಾಗಿ ಕಾದು ಕುಳಿತೆವು. ಟಿಕೆಟ್ಟು ಕೊಡುವವರೆಲ್ಲ ತಿರುಪತಿ ತಿರುಮಲೆ

ದೇವಸ್ಥಾನದ ಇಲಾಖೆಯವರು. ಅಲ್ಲಿನ ಗುಮಾಸ್ತರು ಇಷ್ಟ ಬಂದವರಿಗೆ ಟಿಕೆಟ್ಟು ಕೊಡುತ್ತಿದ್ದರು. ನಾನು ನಾಲ್ಕೈದು ಸಾರಿ ಅಲೆದಮೇಲೆ ಅವರು ತಮ್ಮ ಕೃಪೆಯನ್ನು ನನ್ನ ಮೇಲೆ ಬೀರಿ, ದುಡ್ಡು ತೆಗೆದುಕೊಂಡು ಟಿಕೆಟ್ಟು ಕೊಟ್ಟರು. ಅಷ್ಟರಲ್ಲಿ ಐದು ಘಂಟೆಯಾಯಿತು. ಬಸ್ಸುಗಳು ಹೊರಟು ಹೋಗಿದ್ದುವು. ಪುನಃ ಬರುವ ಬಸ್ಸಿಗಾಗಿ ಕಾದೆವು. ಊರ ಹೊರಬಾಗಿಲಿನ ಗೋಪುರದ ಮೇಲೆ ಕೆತ್ತಿದ್ದ ಚಿತ್ರದ ಬೊಂಬೆಗಳನ್ನು ನೋಡುತ್ತ ನಿಂತೆವು. ಕಲಾನಿಪುಣನು ಶ್ರೀರಾಮನ ಪಟ್ಟಾಭಿಷೇಕವನ್ನು ಚಿತ್ರಿಸಿದ್ದ. ಶ್ರೀರಾಮನ ಸೌಜನ್ಯತೆ, ಸೀತಾಮಾತೆಯ ಪಾತಿವ್ರತ್ಯ, ಲಕ್ಷ್ಮಣನ ಸಹೋದರ ಪ್ರೇಮ, ಹನುಮಂತನ ಸೇವಾತತ್ಪರತೆ—ಎಲ್ಲವೂ ಸಜೀವದಂತಿದ್ದ ಬೊಂಬೆಗಳಲ್ಲಿ ಎದ್ದುಕಾಣುತ್ತಿದ್ದುವು. ನಾನು ರಾಮಾಯಣವನ್ನು ಜ್ಞಾಪಿಸಿಕೊಳ್ಳುತ್ತ ಬೊಂಬೆಯ ಕಡೆ ನೋಡುತ್ತ ನಿಂತಿದ್ದೆ. ಅಷ್ಟರಲ್ಲಿ ಮೋಟಾರು ಬಂತು. ಆದರಲ್ಲಿ ಕುಳಿತು ಪಟ್ಟಣಕ್ಕೆ (ಕೆಳತಿರುಪತಿ) ಹೊರಟೆವು.

ಸೂರ್ಯನು ಮೆಲ್ಲಮೆಲ್ಲನೆ ವೆಂಕಟಾದ್ರಿಯಾಚೆ ಪಡುವಣ ದಿಗಂತದಲ್ಲಿ ಇಳಿದನು. ಬಾನಿನಲ್ಲೂ ಗಿರಿ ಕಾನನಗಳಲ್ಲೂ ಕಡುಗೆಂಪು ಚೆಲ್ಲಾಡುತ್ತಿತ್ತು. ಸುಂದರ ಸಂಧ್ಯಾರಾಣಿ ಓಕಳಿಯನ್ನುಟ್ಟು ರಮಣೀಯವಾಗಿದ್ದಳು. ತಂಗಾಳಿ ಆ ವನರಾಜಿಯ ಮೇಲೆ ನಿಧಾನವಾಗಿ ಬೀಸುತ್ತಿತ್ತು. ಮೋಟಾರು ಕಾಡಿನ ಹಾದಿಯಲ್ಲಿ ಬಳಸಿ ಬಳಸಿ ಹೊರಟಿತು. ಕತ್ತಲೆಯ ಸೆರಗು ಮೆಲ್ಲ ಮೆಲ್ಲನೆ ಕಾಣಿಸಿತು. ಸುತ್ತಲೂ ಭೀಕರವಾದ ಕಂದರಗಳು. ಡ್ರೈವರನು ಮೋಟಾರನ್ನು ನಡೆಸುತ್ತಾ ಆ ಕಡೆ ಈ ಕಡೆ ಮಾತನಾಡುತ್ತಿದ್ದನು. ನಾನು ಅವನನ್ನು ಬಹಳವಾಗಿ ಶಪಿಸಿದೆ, ಮನಸಿನಲ್ಲಿಯೆ. ಮೋಟಾರು ಬೇರೆ ಬಹುವೇಗವಾಗಿ ಹೋಗುತ್ತಿತ್ತು. ದಾರಿಯ ಎಡಬಲ, ಒಂದು ಮೊಳ ದೂರವೇನಾದರೂ ಮೋಟಾರು ಹೋಯಿತೆಂದರೆ ತೀರಿತು; ಎಲ್ಲರೂ ಮೃತ್ಯುವಿನ ಬಾಯಲ್ಲಿ! ಇದರ ಮೇಲೆ ಒಂದೇ ಕೈಯಲ್ಲಿ ಸ್ಟೇರ್ ಹಿಡಿದುಕೊಂಡು ಬೀಡಿ ಹಚ್ಚಿಕೊಳ್ಳುತ್ತಿದ್ದ, ಆ ಮಹಾರಾಯ. ನಾನು ಘಳಿಗೆ ಘಳಿಗೆಗೂ ಅಂದುಕೊಳ್ಳುತ್ತಿದ್ದೆ: 'ಏನು ಜನ ಇವರು? ಇಂಥ ಕತ್ತಲಲ್ಲೂ ಎಚ್ಚರಿಕೆ ಇಲ್ಲದೆ ಮೋಟಾರು ನಡೆಸುತ್ತಾರಲ್ಲ! ದೇವರೆ ಕಾಪಾಡಬೇಕು.' ಹಾಗೂ ಹೀಗೂ ಮೋಟಾರು ಏಳೂವರೆ ಘಂಟೆಗೆ ಬೆಟ್ಟದ ಬುಡಕ್ಕೆ ಬಂದಿತು. ಮೋಟಾರು ನಿಂತ ಕೂಡಲೆ ಭಿಕ್ಷುಕರ ಹೆಂಗಸರೂ ಗಂಡಸರೂ

ಕೈಯಲ್ಲಿ ಒಂದೊಂದು ಹಳೆ ಬಟ್ಟಲನ್ನು ಹಿಡಿದುಕೊಂಡು, ಸಣ್ಣ ಸಣ್ಣ ಹಸುಗೂಸುಗಳನ್ನು ಸೊಂಟದ ಮೇಲೇರಿಸಿಕೊಂಡು, ಮೋಟಾರನ್ನು ಅಡ್ಡ ಗಟ್ಟಿ ನಿಂತರು. ಸಣ್ಣ ಸಣ್ಣ ಹೆಣ್ಣು ಗಂಡುಮಕ್ಕಳೂ ಕೂಡ ಯಾಚಿಸಲು ಬಂದಿದ್ದವು. ಮೋಟಾರಿನಲ್ಲಿದ್ದ ಪ್ರಯಾಣಿಕರೆಲ್ಲರೂ ಮೂರು ಕಾಸು, ಆರು ಕಾಸು ಬಟ್ಟಲಿಗೆ ಹಾಕಿದರು. ಅನಂತರ ಅವರು ಅಡ್ಡಗಟ್ಟಿದ್ದ ದಾರಿಯನ್ನು ಬಿಟ್ಟರು. ಮೋಟಾರು ಹೊರಟಿತು. ಪೆಟ್ರೋಲ್ ಎಣ್ಣೆಯ ವಾಸನೆಗೂ ಮೋಟಾರು ಕುಲುಕಿದ್ದಕ್ಕೂ ಲಕ್ಷ್ಮಿಗೆ ವಾಂತಿಯಾಗುವಂತಾಗಿ ತಲೆ ಸುತ್ತು ಬಂತು. ಆಕೆಯ ಪಕ್ಕದಲ್ಲಿ ಕುಳಿತಿದ್ದ ಹೆಂಗಸು (ತಿರುಪತಿಯವಳು) ಎಷ್ಟು ಬೇಡಿಕೊಂಡರೂ ಜಾಗ ಬಿಡಲಿಲ್ಲ, ಮಲಗಿಕೊಳ್ಳಲಿಕ್ಕೆ. ದೇವಸ್ಥಾನದ ಛತ್ರಕ್ಕೆ ಮೋಟಾರು ಬಂದಮೇಲೆ ನಮ್ಮ ಸಂಗಡ ಬಂದ ಮೈಸೂರು ದೇಶದ ಹೆಂಗಸರು ಗಾಡಿಯೊಳಗೇನೆ ಸ್ವಲ್ಪ ಉಪಚರಿಸಿದರು—ಗಾಳಿ ಬೀಸಿ, ತಲೆಗೆ ನೀರು ತಟ್ಟಿ. ಸ್ವಲ್ಪ ಹೊತ್ತಿನಲ್ಲಿ ಅವಳು ಚೇತರಿಸಿಕೊಂಡ ಮೇಲೆ ನಾವು ಮೊದಲೇ ಇಳಿದುಕೊಂಡಿದ್ದ ನಮ್ಮ ಕೊಠಡಿಗೆ ಹೋದೆವು. ಅಲ್ಲೇ ಇದ್ದ ಹೋಟೆಲ್‌ನಿಂದ ಕಾಫಿ ತಂದು ಕುಡಿದು ಸ್ವಲ್ಪ ಸುಧಾರಿಸಿಕೊಂಡೆವು. ಅನಂತರ ಪೂಜೆಗೆ ಬೇಕಾದ ಸಾಮಾನನ್ನೆಲ್ಲ ತೆಗೆದುಕೊಂಡು ಶ್ರೀ ಗೋವಿಂದರಾಜಸ್ವಾಮಿ ದೇವಸ್ಥಾನಕ್ಕೆ ಹೋದೆವು. ಅಷ್ಟರಲ್ಲಿ ನೂರಾರು ಯಾತ್ರಿಕರು ಪೂಜೆ ಮಾಡಿಸಿ ದೇವಸ್ಥಾನದ ವಿಶಾಲವಾದ ಪ್ರಾಕಾರದ ಒಳಗೂ ಹೊರಗೂ ಸೆಕೆ ಆರಿಸಿಕೊಳ್ಳುತ್ತ ಕುಳಿತಿದ್ದರು.

ಎತ್ತರವಾದ ಹೆಬ್ಬಾಗಿಲಿನಲ್ಲಿ ನುಗ್ಗಿ ಒಳಗೆ ಹೋದೆವು. ದೇವಸ್ಥಾನ ಸುಮಾರು ಮುನ್ನೂರು ಗಜ ದೂರದಲ್ಲಿತ್ತು—ಹೆಬ್ಬಾಗಿಲಿನಿಂದ. ವಿಶಾಲವಾಗಿದ್ದ ಅಂಗಳವನ್ನೆಲ್ಲ ಕೆತ್ತಿ ನಯವಾಗಿದ್ದ ಕಲ್ಲು ಚಪ್ಪಡಿಗಳಿಂದ ಹೊದೆಸಿದ್ದರು. ಪ್ರಾಕಾರದ ಗೋಡೆಗಳು ಸುಮಾರು ಹತ್ತುಹನ್ನೆರಡು ಅಡಿ ಎತ್ತರವಾಗಿದ್ದವು. ಆ ಗೋಡೆಗಳ ಎರಡು ಪಕ್ಕಗಳಲ್ಲಿಯೂ ಲಕ್ಷ್ಮಿ ಸರಸ್ವತಿ ಮುಂತಾದ ಅನೇಕ ಸಣ್ಣಸಣ್ಣ ದೇವಸ್ಥಾನಗಳಿವೆ. ಒಳಗಡೆ ಗೋವಿಂದರಾಜಸ್ವಾಮಿ ದೇವಸ್ಥಾನದ ಬಲ ಪಕ್ಕದಲ್ಲಿ ದೊಡ್ಡ ಕಲ್ಲಿನ ಕಂಬಗಳ ಮೇಲೆ ಕಟ್ಟಿರುವ ವಿಶಾಲವಾದ ಯಜ್ಞಮಂಟಪವಿದೆ. ಆ ಕಲ್ಲು ಕಂಬಗಳ ಮೇಲೆಲ್ಲಾ ಶಿಲ್ಪಿಯು ಚಿತ್ರಕಲೆಯನ್ನು ನಾಜೋಕಾಗಿ ಕೆತ್ತಿದ್ದಾನೆ. ಆ ಕಲಾಸೌಂದರ್ಯದ ರಸವನ್ನು ನನ್ನ ಕಣ್ಣುಗಳಿಂದ ಕೊಂಚ ಕುಡಿದೆ.

ನಾವು ಒಂದು ರೂಪಾಯಿ ಕೊಟ್ಟು ಆರತಿಗೆ ಟಿಕೆಟ್ಟು (ಚೀಟಿ) ತೆಗೆದುಕೊಂಡು ಗರ್ಭಾಂಗಣಕ್ಕೆ ಧಾವಿಸಿದೆವು. ಮುಂಬಾಗಿನಲ್ಲಿ ಕಂಚಿ ನಿಂದ ಮಾಡಿದ ಶ್ರೀ ವೆಂಕಟೇಶನ ಐದಡಿ ವಿಗ್ರಹವಿದೆ. ವಿಗ್ರಹದ ಕಣ್ಣು ಗಳನ್ನು ಸಂಪೂರ್ಣವಾಗಿ ಬಿಳಿಯ ನಾಮಗಳು ಮುಚ್ಚಿದ್ದುವು. ಗೋವಿಂದ ರಾಜಸ್ವಾಮಿಯು ದಕ್ಷಿಣದಿಕ್ಕಿಗೆ ತಲೆ ಹಾಕಿಕೊಂಡು, ಉತ್ತರಕ್ಕೆ ಕಾಲು ಚಾಚಿ, ಪೂರ್ವಾಭಿಮುಖವಾಗಿ ಮಲಗಿದ್ದಾನೆ. ತನ್ನ ಬಲ ತೋಳನ್ನೆ ತಲೆದಿಂಬಾಗಿ ಇಟ್ಟುಕೊಂಡಿದ್ದಾನೆ, ಆ ಅಜಾನುಬಾಹು ನೀಲಕಾಂತಿಯ ಮೂರ್ತಿ! ಸಜೀವದಂತೆ ಮಲಗಿದ್ದ ಮೂರ್ತಿಯನ್ನು ನೋಡಿ ನನ್ನ ಮೈ ಜುಂ ಎಂದಿತು. ಭಗವಂತನ ಸನ್ನಿಧಿಯಲ್ಲಿ ಕೈಮುಗಿದು ನಿಂತೆವು. ಒಬ್ಬಿಬ್ಬರು ಮಾತ್ರ ದರ್ಶನಕ್ಕೆ ಬಂದಿದ್ದರು. ನಮ್ಮ ಪುರಾತನ ಭಾರತದ ಆರ್ಯ ಸಂಸ್ಕೃತಿ ನನ್ನ ದೃಷ್ಟಿಯ ಮುಂದೆ ಗೋಚರಿಸತೊಡಗಿತು. ಯಾವ ಕಲಾನಿಪುಣನ ಹಸ್ತದಿಂದ ಸೃಷ್ಟಿಯಾಯಿತೊ ಈ ಮೂರ್ತಿ! ಇದು ಯಾವ ಯುಗದಲ್ಲಿ ಜನ್ಮ ತಾಳಿತೊ! ನಮ್ಮ ಹಿಂದಿನ ತಲೆಮಾರಿನವರ ಭಕ್ತಿಯಿಂದ ಹೊರಹೊಮ್ಮಿದ ಕಲಾಕೌಶಲ್ಯವನ್ನು ಕಂಡು ಇಂದಿನ ಪ್ರೌಢ ರೆಂದುಕೊಳ್ಳುವ ನಾವು ಒಮ್ಮೊಮ್ಮೆಯಾದರೂ ವಿಸ್ಮಯಗೊಳ್ಳಲೇಬೇಕು.

ಗೋವಿಂದರಾಜಸ್ವಾಮಿಯುವರು ಚಿದಂಬರನಾಯಕವೆಂಬ ಪಟ್ಟಣ ದಿಂದ ಬಂದರು. ಪೂರ್ವದಲ್ಲಿ ಆ ಪಟ್ಟಣಕ್ಕೆ ಚಿತ್ರಕೂಟವೆಂದು ಹೆಸರಿತ್ತು. ತಿಲ್ಲೆನಾಯಕಿಯೆಂಬ ಪರಮ ಭಕ್ತಳು ಗೋವಿಂದರಾಜಸ್ವಾಮಿಯನ್ನು ಯಾವುದೋ ಒಂದು ಕಾರಣದಿಂದ ಚಿದಂಬರದಿಂದ ತಿರುಪತಿಗೆ ಕರೆದು ಕೊಂಡು ಬಂದಳು. ಅನಂತರ ಸ್ವಾಮಿಯು ಇಲ್ಲೇ ನೆಲಸಿದನು. ಯಾತ್ರಿ ಕರು ಬೆಟ್ಟವನ್ನೇರುವಾಗ 'ಗೋವಿಂದ—ಗೋವಿಂದ' ಎಂದು ಈತನ ಹೆಸರನ್ನೇ ಭಜಿಸುತ್ತಾರೆ. ವೈಶಾಖ ಜ್ಯೇಷ್ಠ ಮಾಸಗಳಲ್ಲಿ ಈ ಸ್ವಾಮಿಗೆ ಒಂಬತ್ತು ದಿನಗಳು ವಿಜೃಂಭಣೆಯಿಂದ ಬ್ರಹ್ಮೋತ್ಸವ ನಡೆಯುತ್ತದೆ.

ದರ್ಶನವಾದನಂತರ ಊಟದಶಾಲೆಗಳನ್ನು ಹುಡುಕುತ್ತಾ ಪೇಟೆಯ ನ್ನೆಲ್ಲಾ ಸುತ್ತಿದೆವು. ಚರಂಡಿಗಳಿಂದ ತಡೆಯಲಾಗದ ದುರ್ವಾಸನೆ ಬರು ತ್ತಿತ್ತು. ಒಂದು ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿದ್ದ ಒಬ್ಬನನ್ನು ಕೇಳಿದೆ— "ಊಟದ ಹೋಟಲು ಎಲ್ಲಿದೆ?" ಎಂದು. ಆತ "ಅದೇ, ಹೋಗಿ" ಎಂದು ಒಂದು ಕಟ್ಟಡವನ್ನು ತನ್ನ ಕೈಬೆರಳಿನಿಂದ ಗುರುತಿಸುತ್ತ ತೋರಿಸಿದ. ಆ ಭೋಜನಶಾಲೆಗೆ ನಾವು ಹೋದೆವು. ಬಾಗಿಲನ್ನು

ಸ್ವಲ್ಪ ಮುಚ್ಚಿಕೊಂಡೇ ಜನರಿಗೆ ಊಟ ಹಾಕುತ್ತಿದ್ದರು—ಅಲ್ಲಿ. ನಾನು ಆ ಯಜಮಾನರನ್ನು ಕೂಗಿ "ನಾವು ಊಟಕ್ಕೆ ಬಂದಿದ್ದೇವೆ" ಎಂದು ಬಾಗಿಲಲ್ಲಿ ನಿಂತು ಹೇಳಿದೆ. ಅವರುಏನು ತಿಳಿದುಕೊಂಡರೊ, ತಕ್ಷಣವೆ ಕೈ ಹಿಸುಕಿಕೊಳ್ಳುತ್ತ, ಕೃತಕ ನಗೆಯಿಂದ "ಊಟ ಮುಗಿದು ಹೋಯಿತು, ಸ್ವಾಮಿ" ಎಂದರು. "ನೋಡಿ, ಸ್ವಾಮಿ, ನಾವು ಬಹಳ ದೂರದೇಶದಿಂದ ಬಂದಿದ್ದೇವೆ; ಹೊಟ್ಟೆ ಬೇರೆ ಕಡಿಯುತ್ತಿದೆ" ಎಂದೆ ನಾನು. "ಸುಳ್ಳು ಹೇಳುತೇನೆಯೆ, ಸಾರ್" ಎಂದು ಬಾಗಿಲನ್ನು ಪೂರ್ತಿಯಾಗಿ ಮುಚ್ಚಿಕೊಂಡು ಒಳಗೆ ಹೊರಟೇ ಹೋದ. ಆ ಹೋಟಲಿಗೆ ಬೋರ್ಡುಕೂಡ ಇರಲಿಲ್ಲ. ಬಹುಶಃ ಸರಕಾರದಿಂದ ಅಪ್ಪಣೆ ಪಡೆಯದೆ 'ಬ್ಲ್ಯಾಕ್ ಮಾರ್ಕೆಟ್'ನ ವ್ಯಾಪಾರ ಮಾಡುತ್ತಿದ್ದರೆಂದು ಅವರ ವರ್ತನೆಯಿಂದ ನನಗೆ ತಿಳಿಯಿತು. ಪೇಟೆಯ ಉದ್ದಕ್ಕೂ ಎರಡು ಫರ್ಲಾಂಗು ದೂರ ಹೋದೆವು. ನನಗೆ ಗಳಿಗೆ ಗಳಿಗೆಗೂ ಹಸಿವು ಹೆಚ್ಚುತ್ತಿತ್ತು. ಅಂದುಕೊಂಡೆ 'ಮಹಾತ್ಮಾ ಗಾಂಧೀಜಿಯವರು ಇಪ್ಪತ್ತೊಂದು ದಿನ ಉಪವಾಸ ಹೇಗೆ ಮಾಡಿದರೊ!' ಎಂದು. ಮಹಾತ್ಮರ ಆತ್ಮದ ಶಕ್ತಿ ಯಾವ ಮಟ್ಟಕ್ಕೇರಿರಬೇಕು! ಒಂದೆರಡು ದಿನಗಳು ಕೂಡ ಉಪವಾಸ ಮಾಡಲು ಸ್ಥಿರವಾಗಿ ನಿಲ್ಲದ ನಮ್ಮ ಮನಶ್ಶಕ್ತಿ ಯಾವ ಮಹತ್ಕಾರ್ಯವನ್ನು ಸಾಧಿಸೀತು?

ಬೋರ್ಡು ತಗಲಿಸಿದ್ದ ಒಂದು ಭೋಜನಶಾಲೆಯವರು "ಊಟ ಇದೆ ಬನ್ನಿ" ಎಂದರು. ಹೊಟ್ಟೆ ಕಡಿಯುತ್ತಿದ್ದ ನಮಗೆ ಸ್ವಲ್ಪ ಸಮಾಧಾನವಾಯಿತು. ಊಟಕ್ಕೆ ಕುಳಿತೆವು. ನಮ್ಮ ಬಾಯಿ ಎಂದೂ ನೋಡದಿದ್ದ ಆ ರುಚಿಯ ಸಾರು, ಹಳಸಿದ ಅನ್ನ ನಮ್ಮ ಎಲೆಯ ಮೇಲೆ ಬಿದ್ದುವು. ನಾನು 'ದೇವರೆ ಗತಿ!' ಎಂದುಕೊಂಡೆ. ಅದರ ಮೇಲೆ ತುಪ್ಪ ಎಂದು ಹೇಳಿ ಹಾಕಿದ ನಾಲ್ಕೈದು ಜಾತಿ ಎಣ್ಣೆಗಳ ಕೂಟ ಬೇರೆ ಮತ್ತಷ್ಟು ಹಿಡಿಸದಾಗಿ ಬಡಿಸಿದ್ದ ಎಲೆಗಳನ್ನು ನಾವು ಹಾಗೆಯೆ ಬಿಟ್ಟು ಎದ್ದು ಕೈ ತೊಳೆದುಕೊಂಡು, ಊಟದವನ ಋಣ ತೀರಿಸಿಬಿಟ್ಟು ನಮ್ಮ ಕೊಠಡಿಗೆ ಬಂದೆವು. ರಂಗಸ್ವಾಮಿ ಒಂದಷ್ಟು ಕುರುಕು ತಿಂಡಿ ತೆಗೆಸಿಕೊಂಡು ತಿಂದ.

ನಾವು ಬೆಳಗ್ಗೆ ರೈಲಿನಲ್ಲಿ ಮದರಾಸಿಗೆ ಹೊರಡಬೇಕೆಂದು ತೀರ್ಮಾನ ಮಾಡಿದೆವು. ತಡೆಯಲಾಗದ ಸೆಕೆ. ಯಾತ್ರಿಕರೆಲ್ಲರೂ ತಮ್ಮ ತಮ್ಮ ಕೊಠಡಿಗಳ ಹೊರಗಡೆ ಉರುಳಾಡುತ್ತಿದ್ದರು. ಮೈಯೆಲ್ಲಾ ಉರಿಯುತ್ತಿತ್ತು.

ಸುಮಾರು ಒಂದು ಘಂಟೆಯ ತನಕ ನನ್ನ ಭಾಗಕ್ಕೆ ನಿದ್ದೆ ಇರಲಿಲ್ಲ. ತಿರು ಪತಿಯಿಂದ ಬೆಳಗ್ಗೆ ನಾಲ್ಕೂ ಕಾಲು ಘಂಟೆಗೆ ಮದರಾಸಿಗೆ ರೈಲು ಹೊರ ಡುತ್ತದೆ. ಮಲಗಿ ಬಿಟ್ಟರೆ ಏನು ಗತಿ? ಎಂಬ ಚಿಂತೆ ಬೇರೆ ನನ್ನ ಬೆನ್ನು ಹತ್ತಿತು. ನಮ್ಮ ಪಕ್ಕದ ಕೊಠಡಿಯಲ್ಲಿದ್ದ ಒಬ್ಬ ಅಯ್ಯಂಗಾರ್ಯರು ಸಂಸಾರಸಮೇತ ಯಾತ್ರೆ ಬಂದಿದ್ದರು. ನಮಗೆ ಒಂದೇ ಒಂದು ದಿನದಲ್ಲಿ ತುಂಬಾ ಪರಿಚಿತರಂತಾದರು. ನಿಜವಾದ ಮಾನವನ ಜೀವನವೇ ಹಾಗೆ! ಒಬ್ಬರನ್ನೊಬ್ಬರು ವಿಶ್ವಾಸದಿಂದ ಕಾಣುವುದು, ಒಬ್ಬರು ಮತ್ತೊಬ್ಬರ ಕಷ್ಟ ದಲ್ಲಿ ಭಾಗಿಯಾಗುವುದು. ನಮ್ಮ ಪುಣ್ಯಕ್ಕೆ ಅವರೂ ಅದೇ ರೈಲಿಗೆ ಮದ ರಾಸಿಗೆ ಬರುತ್ತೇವೆಂದು ಹೇಳಿ, "ನೀವು ಸುಖವಾಗಿ ನಿದ್ದೆ ಮಾಡಿ. ನಾನು ನಿಮ್ಮನ್ನು ಎಚ್ಚರಿಸಿ ಕರೆದುಕೊಂಡು ಹೋಗುತ್ತೇನೆ" ಎಂದರು. ಅವರ ಧೈರ್ಯದಿಂದ ನಮಗೆ ಸ್ವಲ್ಪ ನಿದ್ದೆ ಬಂದಿತು.

## ೪. ಮದ್ರಾಸಿನ ಹಾದಿಯಲ್ಲಿ

ಬೆಳಗಿನ ಮೂರು ಘಂಟೆಗೆ ಸರಿಯಾಗಿ ನನ್ನನ್ನು ನನ್ನ ಮಿತ್ರರು ಎಚ್ಚರಿಸಿದರು. ನಾವು ಕೊಠಡಿಯನ್ನು ಜವಾನನಿಗೆ ಒಪ್ಪಿಸಿದೆವು. ಕೈಕಾಲು ಮುಖ ತೊಳೆದುಕೊಂಡು ರೈಲ್ವೆ ನಿಲ್ದಾಣಕ್ಕೆ ಹೊರಟೆವು. ನಮ್ಮ ಮಿತ್ರರು ಗಂಟು ಮೂಟೆಗಳನ್ನು ತೆಗೆದುಕೊಂಡು ನಮ್ಮನ್ನು ಹಿಂಬಾಲಿಸಿದರು. ನಮ್ಮ ಅಯ್ಯಂಗಾರರ ಪತ್ನಿಯೂ ಒಂದು ಹೆಣ್ಣು ಮಗುವೂ ಲಕ್ಷ್ಮಿಯ ಸಹಪಾಠಿಗಳಾದರು. ಎಲ್ಲರೂ ಒಟ್ಟಿಗೆ ಒಂದೆ ಡಬ್ಬಿಯಲ್ಲಿ ಕುಳಿತೆವು. ಇನ್ನೂ ಬೆಳಗಾಗಿರಲೆ ಇಲ್ಲ. ರೈಲು ಹೊರಟಿತು. ಜೊತೆಯಲ್ಲಿದ್ದ ಮೂರು ವರ್ಷದ ಹೆಣ್ಣು ಮಗುವನ್ನು ಆ ದಂಪತಿಗಳು ಬಹು ಪ್ರೇಮದಿಂದ ಮುತ್ತಿಡುತ್ತಿದ್ದರು. ಮಕ್ಕಳಲ್ಲಿ ಆ ದಂಪತಿಗಳು ಇಟ್ಟಿರುವ ಪ್ರೀತಿಯ ಆಳವನ್ನು ನೋಡಿ ನಿಜವಾಗಿಯೂ ನನಗೆ ಆಶ್ಚರ್ಯವಾಯಿತು. ಮಲಗಿದ್ದ ಆ ಮಗುವಿನ ಕಡೆಯೇ ನಾನು ನೋಡುತ್ತಿದ್ದೆ. ಆ ನೋಟವನ್ನರಿತ ನನ್ನ ಮಿತ್ರರು "ಇದು ನಮ್ಮ ಮಗುವಲ್ಲ, ಸ್ವಾಮಿ" ಎಂದರು. ಅವರ ಮಾತನ್ನು ಕೇಳಿ ನಾನೂ ಲಕ್ಷ್ಮಿಯೂ ಚಿಕ್ಕಸಬೆರಗಾದೆವು. ಕೊಂಚಹೊತ್ತು ಅವರೂ ಮೌನದಿಂದಿದ್ದರು. ನಾವೂ ಮುಂದಕ್ಕೆ ಯಾವ ಪ್ರಶ್ನೆಯನ್ನೂ ಹಾಕಲಿಲ್ಲ. ನನ್ನ ಕುತೂಹಲ ಕ್ಷಣಕ್ಷಣಕ್ಕೂ ಹೆಡೆಬಿಚ್ಚಿ ನಿಂತಿತು. ಅಷ್ಟರಲ್ಲಿ ಅವರೇ

ಹೇಳಿದರು :

"ನನ್ನ ಮಗನ ಮಗು, ಸ್ವಾಮಿ. ಆತ ಮದರಾಸಿನಲ್ಲಿ ಎಂ.ಎ. ಪರೀಕ್ಷೆಗೆ ಓದುತ್ತಿದ್ದಾನೆ. ನಮ್ಮ ಸೊಸೆಯೂ ಈ ಮಗುವೂ ನಮ್ಮ ಹಳ್ಳಿಯಲ್ಲಿ ನಮ್ಮ ಜೊತೆಯಲ್ಲಿಯೇ ಇದ್ದಾರೆ. ತಲೆ ಮುಡಿ ಕೊಡಬೇಕಿತ್ತು; ಅದಕ್ಕೆ ಕರೆದುಕೊಂಡು ಬಂದೆ. ನೋಡಿ, ನಾಲ್ಕು ದಿನಗಳಿಂದ ತಾಯಿಯ ಹಂಬಲ ಮರೆಸಿಬಿಟ್ಟಿದ್ದೇವೆ" ಎಂದು.

"ಹಾಗಿರಬೇಕು ಸ್ವಾಮಿ, ಮೊಮ್ಮಕ್ಕಳ ಮೇಲೆ ಪ್ರೀತಿ" ಎಂದೆ.

"ಅಯ್ಯೋ, ನಮ್ಮದೇನಿದೆ ಸ್ವಾಮಿ; ಎಲ್ಲಾ ಆ ಭಗವಂತನ ಕೃಪೆ. ಮಕ್ಕಳನ್ನು ಪ್ರೀತಿಯಿಂದ ಪಾಲಿಸಬೇಕು. ಮಕ್ಕಳು ದೇವರಿಗೆ ಸಮಾನ. ಮಕ್ಕಳನ್ನು ಸತ್ಪ್ರಜೆಯನ್ನಾಗಿ ಮಾಡುವ ಹೊಣೆಗಾರಿಕೆ ತಂದೆತಾಯಿಗಳದು."

"ನಿಜ ಸ್ವಾಮಿ, ನಿಜ."

ಅಷ್ಟರಲ್ಲಿ ರೇಣಿಗುಂಟ ನಿಲ್ದಾಣಕ್ಕೆ ಗಾಡಿ ಬಂದಿತು. ಆ ಗಾಡಿಯಿಂದ ಇಳಿದು ಮದರಾಸಿಗೆ ಹೋಗುವ ಗಾಡಿಗೆ ಕುಳಿತೆವು. ಅಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ವಿಶಾಲವಾದ ಚಪ್ಪಟೆಯ ಭೂಮಿ ಬೆಳೆ ಕಾಣದೆ ಭಿಕಾರಿಯಂತೆ ಕಾಣುತ್ತಿತ್ತು. ಸೂರ್ಯನು ಮೆಲ್ಲಮೆಲ್ಲನೆ ಪೂರ್ವದಿಗಂತದ ಅಂಚಿನಿಂದ ಉದಯಿಸಿದನು. ಹೊಂಬಣ್ಣದ ಕಿರಣಗಳು ಕೋಲುಕೋಲಾಗಿ ಕಿಟಕಿಯಿಂದ ತೂರಿಬಂದು ನಮ್ಮ ಮೇಲೆ ಬೀಳುತ್ತಿದ್ದವು. ಗಾಡಿ ಏಳು ಗಂಟೆಗೆ ಪುಟ್ಟೂರಿಗೆ ಬಂತು. ಅದು ಚಿಕ್ಕ ಊರು. ನನ್ನ ಸ್ನೇಹಿತರು ಹೇಳಿದರು : "ಇಲ್ಲಿ ಒಬ್ಬ ವೈದ್ಯನಿದ್ದಾನೆ. ಆತ ನಿರಕ್ಷರಕುಕ್ಷಿ. ಯಾವ ಪಾಶ್ಚಿಮಾತ್ಯ ವೈದ್ಯಶಾಸ್ತ್ರ ಪ್ರವೀಣನೂ ಅವನ ಮುಂದೆ ನಿಲ್ಲಲಾರ, ಕೈಗುಣದಲ್ಲಿ ; ಚಿಕಿತ್ಸೆಯಲ್ಲಿ. ಯಾವ ಪ್ರಾಣಿಯ ದೇಹದಲ್ಲಾಗಲಿ ಮೂಳೆ ನುಚ್ಚುನೂರಾಗಿದ್ದರೂ ಒಂದೇ ಒಂದು ಸಾರಿ ಕಟ್ಟಿ ಔಷಧಿ ಹಾಕುತ್ತಾನೆ. ನುಚ್ಚಾದ ಮೂಳೆ ಸೇರಿಕೊಂಡಿತು ಅಂತಲೇ ತಿಳಿದುಕೊಳ್ಳಬೇಕು. ಔಷಧಿ ಯಾವುದು ಗೊತ್ತೆ, ಸ್ವಾಮಿ? ಬರಿ ಯಾವುದೊ ಸೊಪ್ಪಿನ ರಸ."

ನಾನೊಬ್ಬನೇ ಅಲ್ಲ ತಲೆದೂಗಿದವನು. ನಮ್ಮ ಅಕ್ಕಪಕ್ಕದಲ್ಲಿ ಕುಳಿತಿದ್ದ ದೂರದೇಶದವರೆಲ್ಲ ತೆರೆದ ಬಾಯಿಂದ ಮಾತನ್ನು ಕೇಳುತ್ತಿದ್ದರು. ಒಬ್ಬ ಪ್ರಯಾಣಿಕ "ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿರುವ ಡಾಕ್ಟರುಗಳೆಲ್ಲ ಎಂ.ಬಿ.ಬಿ.ಎಸ್. ಪರೀಕ್ಷೆ ಮುಗಿಸಿಕೊಂಡು ಬಂದಿದ್ದಾರೆ; ಮತ್ತೆ ಕೆಲವರು

ಇಂಗ್ಲೆಂಡಿನಿಂದ ಎಫ್.ಆರ್.ಸಿ.ಎಸ್. ಪ್ಯಾಸ್ ಮಾಡಿಕೊಂಡು ಬಂದಿದ್ದಾರೆ. ಯಾರಿಗಾದರೂ ಗ್ರಹಚಾರ ಕಡಿಮೆಯಾಗಿ ಮೂಳೆಗೆ ಸ್ವಲ್ಪ ಪೆಟ್ಟು ಬಿದ್ದರೆ ಆ ಭಾಗವನ್ನೇ ತೆಗೆದುಹಾಕಬೇಕು ಮೊದಲು ಎನ್ನುತ್ತಾರಲ್ಲ, ಸ್ವಾಮಿ?" ಎಂದು ಹೇಳಿದ.

ನಮ್ಮ ಅಯ್ಯಂಗಾರ್ಯರು ಹೇಳಿದರು: "ಅದು ಅಲೋಪತಿಯ ಶಿಕ್ಷಣ ಸ್ವಾಮಿ. ಇದು ಪುರಾತನ ಭಾರತದ ಆಯುರ್ವೇದದ ಶಿಕ್ಷಣ. ಅಲೋಪತಿಯನ್ನೂ ಆಯುರ್ವೇದವನ್ನೂ ಮೆಡಿಕಲ್ ಕಾಲೇಜುಗಳಲ್ಲಿ ಬೋಧಿಸಿದರೆ ಒಳ್ಳೆಯ ಪ್ರಯೋಜನವಾಗುವುದೆಂದು ಕಾಣುತ್ತದೆ. ಆಯುರ್ವೇದ ಪಂಡಿತರು ಆಪರೇಷನ್ ಮಾಡುತ್ತಾರೆಯೆ? ಆಪರೇಷನ್ ಮಾಡುವಂತಹ ರೋಗಗಳಿಗೆ ಎಂ.ಬಿ.ಬಿ.ಎಸ್. ಮತ್ತು ಎಫ್.ಆರ್.ಸಿ.ಎಸ್. ವೈದ್ಯರಿಲ್ಲದಿದ್ದರೆ ಗತಿ ಏನು? ಅಲೋಪತಿಯಲ್ಲಿ, ಮಲೇರಿಯಾ, ನಿಮೋನಿಯ, ಟೈಫಾಯಿಡ್‌ಗಳಿಗೆ ಅದ್ಭುತವಾದ ಔಷಧಿಗಳಿವೆ. ಒಂದೆರಡು ದಿವಸಗಳಲ್ಲೇ ಇಂಜಕ್ಷನ್ ಕೊಟ್ಟು ರೋಗವನ್ನು ಹೋಗಲಾಡಿಸುತ್ತಾರೆ. ಪ್ಲೇಗು, ಕಾಲರಗಳಿಗೂ ಆಶ್ಚರ್ಯಕರವಾದ ಔಷಧಿಗಳಿವೆ. ಈ ರೋಗಗಳಿಗೆ ನಮ್ಮ ಆಯುರ್ವೇದದಲ್ಲಿ ಔಷಧಿಗಳಿದ್ದರೂ ಅಲೋಪತಿಯ ಔಷಧಿಗಳಷ್ಟು ಶೀಘ್ರನಾಗಿ, ನಂಬಿಕೆಯಾಗಿ ಗುಣಪಡಿಸಲಾರವು. ಒಂದೇ ಒಂದು ದೃಷ್ಟಿಯಿಂದ ಯಾವುದನ್ನೂ ಅಳೆಯಬಾರದು."

ನಾವು ಪಾಶ್ಚಿಮಾತ್ಯರ ವೈದ್ಯವೇ ದೊಡ್ಡದೆಂದು ಭಾವಿಸಿದ್ದೇವೆ. ಇಂಡಿಯಾ ದೇಶವು ವೈದ್ಯದಲ್ಲಿ ಪುರಾತನದಿಂದಲೂ ಪ್ರಸಿದ್ಧಿಯಾದುದು. ಚರಕನೆಂಬ ವೈದ್ಯಪ್ರವೀಣನು ವೈದ್ಯಶಾಸ್ತ್ರವನ್ನು ಬರೆದಿದ್ದಾನೆ. ಈತ ಕಾನಿಷ್ಕ ಚಕ್ರವರ್ತಿಯ ಆಸ್ಥಾನದಲ್ಲಿದ್ದ. ಇವನಿಂದ ವೈದ್ಯವನ್ನು ಅರಬ್ಬರು ಕಲಿತರು. ಅರಬ್ಬರಿಂದ ಇಂಗ್ಲೀಷರು ಕಲಿತುಕೊಂಡರು. ಇಂಗ್ಲೀಷರು ವಿಶೇಷವಾಗಿ ವೈದ್ಯಕ್ಕೆ ಪ್ರೋತ್ಸಾಹ ಕೊಟ್ಟು ಅದನ್ನು ಬೆಳೆಸಿಕೊಂಡು ಬಂದರು. ಈತನ ಅನಂತರ ಬದುಕಿ ಬಾಳಿದ ಶುಶ್ರುತನೆಂಬ ವೈದ್ಯಪ್ರವೀಣನು ಶಸ್ತ್ರಚಿಕಿತ್ಸೆಯ ಮೇಲೆ ಅನೇಕ ಪುಸ್ತಕಗಳನ್ನು ಬರೆದಿದ್ದಾನೆ. ಒಂದುನೂರ ಇಪ್ಪತ್ತೇಳು ಶಸ್ತ್ರಗಳನ್ನು ತನ್ನ ಶಾಸ್ತ್ರದಲ್ಲಿ ಹೇಳಿದ್ದಾನೆ. ಆ ಶಸ್ತ್ರಗಳು ಕೂದಲನ್ನೂ ಕೂಡ ಬಹು ಸುಲಭಾಗನಾಗಿ ಭಾಗ ಮಾಡುವಂತಹ ಹರಿತವುಳ್ಳವು. ಹೆಣಗಳನ್ನು ನದಿಯ ದಡದಲ್ಲಿ ತಾನೇ ಕೊಯ್ದು ದೇಹದ ನಾನಾ ಭಾಗಗಳನ್ನು ವಿಂಗಡಿಸಿ, ತನ್ನ ವಿದ್ಯಾರ್ಥಿಗಳಿಗೆ ತೋರಿಸಿ,

ಯಾವ ಯಾವ ರೋಗಕ್ಕೆ ಯಾವ ಯಾವ ಶಸ್ತ್ರಗಳನ್ನು ಉಪಯೋಗಿಸ ಬೇಕೆಂಬುದನ್ನು ಖುದ್ದಾಗಿ ಬೋಧಿಸುತ್ತಿದ್ದನು. ಕಾಲ ಗತಿಸಿದಂತೆ ಆ ಶಾಸ್ತ್ರಗಳ ಪುಸ್ತಕಗಳೆಲ್ಲವೂ ಸ್ವಾರ್ಥಪರರ ಕೈಸೇರಿ ಇಂಡಿಯಾ ದೇಶದಿಂದ ಕಣ್ಮರೆಯಾದವು. ನಮ್ಮ ದೇಶದಿಂದ ವಿದ್ಯಾರ್ಥಿಗಳು ವೈದ್ಯದಲ್ಲಿ ಹೆಚ್ಚಿನ ವ್ಯಾಸಂಗಮಾಡಲು ಇಂಗ್ಲೆಂಡಿಗೆ ಹೋಗುತ್ತಾರೆ. ಶಸ್ತ್ರಚಿಕಿತ್ಸೆಯೆ ಅವರ ಮುಖ್ಯ ಗುರಿ. ಆಯುರ್ವೇದದ ಔಷಧಿಗಳು ಅನೇಕ ರೋಗಗಳನ್ನು ಶಸ್ತ್ರ ಚಿಕಿತ್ಸೆ ಇಲ್ಲದೆ ಗುಣಪಡಿಸುತ್ತವೆ.

ಪುಟ್ಟೂರಿಂದ ರೈಲು ತಿರುತಣಿಗೆ ಬಂತು. ಅದೊಂದು ಸಣ್ಣ ಊರು. ಊರಿನ ಸಮೀಪದ ಬೆಟ್ಟದ ಮೇಲೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ ವಿದೆ. ಮೇಲೆ ಸುಂದರವಾದ ಕಲ್ಯಾಣಿ ಇದೆ. ಪ್ರತಿ ಹುಣ್ಣಿಮೆಯ ದಿನ ಅನೇಕ ಯಾತ್ರಿಕರು ಬರುತ್ತಾರೆ. ಅಲ್ಲಿಂದ ವಿಶಾಲವಾಗಿ ಹಾಸಿದ್ದ ಮೈದಾನ ಪ್ರದೇಶದಲ್ಲಿ ರೈಲು ಹೊರಟಿತು. ಅಲ್ಲಲ್ಲಿ ಅಪೂರ್ವವಾಗಿ ಏತದ ಬಾವಿ ನೀರಿನ ಸಹಾಯದಿಂದ ವ್ಯವಸಾಯ ಮಾಡಿರುವುದು ಕಾಣುತ್ತಿತ್ತು. ಭೂಮಿ ಅಷ್ಟೊಂದು ಫಲವತ್ತಾಗಿಲ್ಲ. ಸಣ್ಣ ಸಣ್ಣ ಗುಡಿಸಲುಗಳಿಂದ ತುಂಬಿದ್ದ ಚಿಕ್ಕ ಹಳ್ಳಿಗಳು ಮಾತ್ರ ಕಣ್ಣಿಗೆ ಬೀಳುತ್ತಲೇ ಇದ್ದುವು. ಹರಿ ಜನರು ವಾಸಮಾಡುತ್ತಿದ್ದ ಐದಡಿ ಎತ್ತರದ ತಾಳೆಗರಿಯಿಂದ ಕಟ್ಟಿದ ಗುಡಿಸಲುಗಳು ನಾಯಿ, ನರಿ, ಹಂದಿಗಳಿಗೆ ಯೋಗ್ಯವೇ ಹೊರತು ಮನುಷ್ಯರಿ ಗಲ್ಲ! ಅವರ ಗುಡಿಸಲುಗಳಿಗೆ ಎತ್ತರವಾದ ಮನುಷ್ಯ ಭಯದಿಂದ ಬಗ್ಗಿ ನುಗ್ಗಬೇಕು. ಕೊಳಕು ಅನಾಗರೀಕತೆ ಅವರ ಗುಡಿಸಲುಗಳ ಮುಂದೆ ಮಾತ್ರ ಅಲ್ಲ ಅವರ ಮೈಮೇಲೆಲ್ಲಾ ಚೆಲ್ಲಾಡುತ್ತಿತ್ತು. ಇಡೀ ಜಗತ್ತೆ ಇವರನ್ನು ಮುಂದಕ್ಕೆ ತರಬೇಕೆನ್ನುವಾಗ ಇವರು ಹಿಂದು ಹಿಂದಕ್ಕೆ ಏಕೆ ಹೋಗುತ್ತಾ ಇದ್ದಾರೆಂಬುದೇ ಒಂದು ದೊಡ್ಡ ಸಮಸ್ಯೆ! ಅದರಲ್ಲೂ ಮದ್ರಾಸು ಸರಕಾರ ಬಹು ತೀವ್ರವಾಗಿ ಹರಿಜನೋದ್ಧಾರದ ಪವಿತ್ರ ಕಾರ್ಯದಲ್ಲಿ ಕೈಹಾಕಿದೆ; ಬೇಕಾದಷ್ಟು ದುಡ್ಡು ವೆಚ್ಚ ಮಾಡುತ್ತಿದ್ದಾರೆ ಅವರ ಅಭಿವೃದ್ಧಿಗೆ. ನನಗೊಂದು ಸಂಶಯ – ಸರ್ಕಾರದವರು ಕೊಡುವ ದುಡ್ಡು ಸರಿಯಾದ ರೀತಿಯಲ್ಲಿ ಹರಿಜನರ ಅಭಿವೃದ್ಧಿಗೆ ವಿನಿಯೋಗಿಸಲ್ಪಡು ತ್ತದೆಯೇ? ಎಂದು. ಅಥವಾ ಕೋತಿ ಕಜ್ಜಾಯ ತೂಕಮಾಡಿದ ಹಾಗಾಗು ತ್ತಿದೆಯೊ ತಿಳಿಯದು. ಆಜನ್ಮ ಬ್ರಹ್ಮಚಾರಿಯೂ ಪಂಡಿತನೂ ಕೆಚ್ಚೆದೆಯ ಸನ್ಯಾಸಿಯೂ ಪಾಮರರ ಸೇವಕನೂ ಆದ ಶ್ರೀ ಸ್ವಾಮಿ ವಿವೇಕಾನಂದರು

ಹೇಳಿರುವಂತೆ ದರಿದ್ರರ ಸೇವೆಯೆ ದೇವರ ಸೇವೆ. ಅದಕ್ಕಿಂತಲೂ ಪವಿತ್ರ ವಾದ ಕಾರ್ಯವಿಲ್ಲ. ಸರ್ಕಾರದವರು ಕೈಕೊಂಡಿರುವ ಈ ಕಾರ್ಯ ಪವಿತ್ರವಾದುದು. ಆದರೆ ಫಲ ಸರಿಯಾಗಿ ದೊರೆಯುತ್ತಿದೆಯೆ ? ಎಂಬುದು ಮಾತ್ರ ದೊಡ್ಡ ಪ್ರಶ್ನಾರ್ಥಕ ಚಿಹ್ನೆ.

ಮೈಸೂರು ಸಂಸ್ಥಾನದಲ್ಲಿ ಗೋಪಾಲಸ್ವಾಮಿ ಅಯ್ಯರ್ ಅವರು ೧೯೨೨ನೆಯ ಇಸವಿಯಲ್ಲೇ ಹರಿಜನರ ಸೇವೆಗೆ ತಮ್ಮ ಬಾಳನ್ನು ಮೀಸಲಾ ಗಿಟ್ಟರು. ತಮ್ಮ ಜ್ಞಾನಜ್ಯೋತಿಯನ್ನು ಹರಿಜನರ ಗುಡಿಸಲುಗಳಿಗೆ ಹೊತ್ತು ತಂದರು. ಅಜ್ಞಾನದಿಂದ ಮುಸುಕಿದ್ದ ಅವರ ಕಣ್ಣುಗಳನ್ನು ತೆರೆದು ಜ್ಞಾನ ಬೀರಿದ ಆ ಮಹಾನುಭಾವ. ಮಹಾತ್ಮಾ ಗಾಂಧೀಜಿಯವರು ಇಡೀ ಭಾರತ ದಲ್ಲೆಲ್ಲಾ ಈ ಕಾರ್ಯಕ್ಕೆ ಕೈಹಾಕಿದರು. ಸೇವಾಬುದ್ಧಿ ಸಂಸ್ಕಾರದ ವಾಸನೆ. ಹೃದಯ ಪರಿವರ್ತನೆಯಾಗಬೇಕು. ಮನಸ್ಸು ಶುದ್ಧಿಯಾಗಬೇಕು. ಆತ್ಮ ಶಕ್ತಿ ಬಲವಾಗಬೇಕು. ಸ್ವಾರ್ಥತೆಯ ಕತ್ತಲನ್ನು ಜ್ಞಾನಜ್ಯೋತಿಯಿಂದ ನಾಶಮಾಡಬೇಕು. ಆಗ ಮನುಷ್ಯ ನಿಷ್ಕಳಂಕ ಪ್ರೇಮಮಯ ಸೇವೆಗೆ ಕೈ ಹಾಕಲು ಅರ್ಹನಾಗುತ್ತಾನೆ.

ರೈಲುಗಾಡಿ ಏಳೂವರೆ ಘಂಟೆಗೆ ಸರಿಯಾಗಿ ಅರಕೋಣಂ ನಿಲ್ದಾಣವನ್ನು ತಲಪಿತು. ಅದೊಂದು ದೊಡ್ಡ ಜಂಕ್ಷನ್ ನಿಲ್ದಾಣ. ದೇಶದ ನಾನಾ ಮೂಲೆಗಳಿಗೆ ಹೋಗುವ ರೈಲುಗಳು ಅಲ್ಲಿ ಸಂಧಿಸುತ್ತವೆ. ಪಟ್ಟಣ ನಾಜೋಕಾಗಿದೆ. ನಾವು ಮೂವರು ಮತ್ತು ನಮ್ಮ ಮಿತ್ರರು ಅಲ್ಲಿ ಫಲಾ ಹಾರ ಮುಗಿಸಿ ನಮ್ಮ ಡಬ್ಬಿಯಲ್ಲಿ ಕುಳಿತೆವು. ಭಿಕ್ಷುಕನೊಬ್ಬನು ಗಾಡಿ ಯೊಳಕ್ಕೆ ಬಂದ. ಆತ ಹೆಳವ. ಅಲ್ಲಿ ಕುಳಿತಿದ್ದ ಪ್ರಯಾಣಿಕರನ್ನು ಬಹು ದೈನ್ಯದಿಂದ ಬೇಡಿಕೊಂಡ—ಕಾಸು ಕೊಡಿರೆಂದು. ಅವನ ಕೈಮೇಲೆ ಒಂದು ಕಾಸೂ ಬೀಳಲಿಲ್ಲ. ನನ್ನಲ್ಲಿಗೆ ಬಂದು ಮುದುರಿ ಬೆನ್ನು ಸೇರಿದ್ದ ತನ್ನ ಹೊಟ್ಟೆಯನ್ನು ತೋರಿಸಿದ ಅವನ ದೈನ್ಯದೃಷ್ಟಿ ನನ್ನಲ್ಲಿ ಕನಿಕರ ವನ್ನುಂಟುಮಾಡಿತು. " ತೆಗೆದುಕೊ; ಅಲ್ಲಿ ಹೋಗಿ ದೋಸೆ ತಿಂದು ನೀರು ಕುಡಿ " ಎಂದು ಮೂರಾಣೆಯನ್ನು ಅವನ ಅಂಗೈ ಮೇಲಿಟ್ಟೆ. ಭಿಕ್ಷುಕ ಕೆಳಗಿಳಿದು ಇಡ್ಲಿ ದೋಸೆ ಮಾರುತ್ತಿದ್ದಲ್ಲಿಗೆ ಹೋಗಿ, ತೆಗೆದುಕೊಳ್ಳುವವ ನಂತೆ ನಟಿಸಿ ಜನರ ಗುಂಪಿನಲ್ಲಿ ಮೆಲ್ಲನೆ ಮಾಯವಾದ. ಅವನು ತಿಂದು ತೃಪ್ತಿಪಡುವುದನ್ನು ನೋಡಬಯಸುತ್ತಿದ್ದ ನನ್ನ ಮನಸ್ಸು ನೊಂದಿತು. ಕೆಳಗಿಳಿದು ಅವನನ್ನು ಹುಡುಕಲಾರಂಭಿಸಿದೆ. ಬಹು ಬಿರುಸಾಗಿ ಜನರ

ಮಧ್ಯೆ ತೂರಿ ತೂರಿ ಹೋಗುತ್ತಿದ್ದ ಭಿಕ್ಷುಕನನ್ನು ರಟ್ಟೆ ಹಿಡಿದುಕೊಂಡು ಕರೆದುಕೊಂಡು ಬಂದು, ಮೂರು ಆಣೆಗೂ ದೋಸೆಯನ್ನು ಕೊಡಿಸಿದೆ. ದೋಸೆ ತಿಂದು ನೀರು ಕುಡಿದು ಬೇರೆ ಪೆಟ್ಟಿಗೆ ಹತ್ತಿಕೊಂಡ ನಮ್ಮ ಅಯ್ಯಂಗಾರ್ರು ನಗುತ್ತ ಹೇಳಿದರು: "ನೋಡಿ, ನಮ್ಮ ಕಡೆ ಭಿಕ್ಷುಕರೂ ಕೂಡ ಚೌಕಾಶಿ ಮಾಡ್ತಾರೆ. ನಿಮ್ಮ ಮೈಸೂರು ದೇಶ ಧರ್ಮರಾಯನಂತಹ ಸೀಮೆ. ಈ ವಿದ್ಯೆ ಕಲಿತಿರುವುದರಿಂದಲೆ ಇವರಿಗೆ ಈ ಪಾಡು"

"ಅಯ್ಯೋ, ಖದೀಮರು, ಸ್ವಾಮಿ. ನೀವು ಹೇಳಿದ್ದು ನಿಜ" ಎಂದೆ.

"ಈ ದೇಶದಲ್ಲಿ ಅನೇಕರು ಬಡವರಿದ್ದಾರೆ. ದುಡ್ಡೆಲ್ಲಾ ವ್ಯಾಪಾರಿಗಳ ಕೈಸೇರಿದೆ. ಬಡವನ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಲು ಯಾರೂ ಶ್ರಮಿಸುತ್ತಿಲ್ಲ"

"ನಮ್ಮ ಮೈಸೂರು ಸೀಮೆಯಲ್ಲೂ ಅನೇಕರು ಬಡವರಿದ್ದಾರೆ, ಸ್ವಾಮಿ. ಇಲ್ಲಿ ಸೋಮಾರಿತನ ಹೆಚ್ಚು ಎಂದು ಕಾಣುತ್ತೆ. ನಮ್ಮಲ್ಲಿನ ಜನರು ಕೊಂಚ ಶ್ರಮಪಟ್ಟು ವಿವೇಕದಿಂದ ತಮ್ಮ ದಿನಚರಿಯ ಕೆಲಸವನ್ನು ಮಾಡುತ್ತಾರೆ"

"ಭಿಕ್ಷುಕರ ಸಂಖ್ಯೆಯೇನೋ ಬಹಳ ಇದೆ ಇಲ್ಲಿ. ಇಂಗ್ಲೆಂಡಿನ ಎಲಿಜಬೆತ್‌ರಾಣಿ ಭಿಕ್ಷುಕರಿಗೆಲ್ಲಾ ಉದ್ಯೋಗವನ್ನು ಒದಗಿಸಿದ್ದಳಲ್ಲ, ಹಾಗೆ ಇವರನ್ನೆಲ್ಲಾ ಹಿಡಿದು ಸರ್ಕಾರದವರು ಒಂದು ಕಾರ್ಖಾನೆಯಲ್ಲಿ ಕೆಲಮಾಡಿಸಿದರೆ ಬಹಳ ಉತ್ತಮ. ಅವರ ಮಕ್ಕಳ ಭವಿಷ್ಯಜೀವನವಾದರೂ ಉತ್ತಮಗೊಳ್ಳುತ್ತದೆ."

ರಂಗಸ್ವಾಮಿ ಮಧ್ಯೆ ಬಾಯಿ ಹಾಕಿ "ಅದೇಕಪ್ಪ ಔತಾಡುತ್ತಿದ್ದ ಆ ಭಿಕ್ಷುಕ, ನೀನು ಕೊಟ್ಟ ದುಡ್ಡಿಗೆ ದೋಸೆ ತಕ್ಕೊಂಡು ತಿನ್ನದೆ?" ಎಂದ.

"ಇನ್ನೇತಕ್ಕೆ? ದುಡ್ಡು ಗಂಟು ಹಾಕಿಕೊಂಡು ಹೋಗುವುದಕ್ಕೆ."

"ಹೊಟ್ಟೆ ಹಸಿದರೂ ದುಡ್ಡು ಯಾಕೆ ಗಂಟಾಕ್ಕೋತಾನೆ?"

"ಯಾಕೆ—ಅವನ ಕರ್ಮ ಅದು."

ನಮ್ಮ ಅಯ್ಯಂಗಾರರು, "ಆ ಭಿಕ್ಷುಕನ ಮಾತಿರಲಿ, ಅನೇಕ ಸಿರಿವಂತರು ಕಾಸಿನ ಮೇಲಿನ ಕಿಲುಬನ್ನು ಸಹ ಕಳೆಯುವುದಿಲ್ಲ. ಒಂದು ಕಾಸಿಗೆ ಒಂಬತ್ತು ಗಂಟು ಹಾಕಿ, ಬಡವನ ಶ್ರಮದಿಂದ ತಮ್ಮ ಐಶ್ವರ್ಯವನ್ನು ಬೆಳೆಸಿಕೊಂಡು, ದಾನ ಧರ್ಮ ಯಾವುದನ್ನೂ ಮಾಡದೆ ಸಾಯುವರು. ಕೊನೆಗೆ ಆ ದುಡ್ಡಿನ ಗತಿ ಏನಂತೀರ—ಸಿಕ್ಕಿದವರ ಪಾಲು. ಇವ

ನಿಗೆ ಶಾಸ್ತ್ರೋಕ್ತವಾಗಿ ಸಂಸ್ಕಾರವನ್ನೂ ಮಾಡುವುದಿಲ್ಲ. ದುಡ್ಡು ಇದ್ದರೂ ಅದನ್ನು ಅನುಭವಿಸದಿರುವುದು ಎಂಥ ದೊಡ್ಡ ಕರ್ಮ, ಸ್ವಾಮಿ!" ಎಂದರು. ನಾನು "ನಿಜ ಸ್ವಾಮಿ," ಎಂದು ತಲೆದೂಗಿದೆ. ಎಂಟು ಘಂಟೆಗೆ ರೈಲು ಅಲ್ಲಿಂದ ಹೊರಟಿತು. ಎಲ್ಲೋ ಬಹು ದೂರದಲ್ಲಿ ಸ್ವಲ್ಪ ಸ್ವಲ್ಪ ಭೂಮಿಯನ್ನು ರೈತರು ಕೋಣಗಳಿಂದ ಉಳುತ್ತಿದ್ದರು.

ಕರಿಯ ದೇಹದ ಮನುಷ್ಯರು ತಲೆಗೆ ಒಂದು ತುಂಡು ಕೆಂಪು ವಸ್ತ್ರವನ್ನು ಸುತ್ತಿಕೊಂಡು ಕೌಪೀನ ಕಟ್ಟಿಕೊಂಡು ನೇಗಿಲನ್ನು ಹಿಡಿದು ಕೋಣನ ಹೇರಿನ ಹಿಂದೆ ಕೋಣಗಳ ಹೆಜ್ಜೆಗೆ ತಾಳ ಹಾಕುತ್ತ ಆನೆಯ ವೇಗದಲ್ಲಿ ಚಲಿಸುತ್ತಿದ್ದರು.

ಕೋಣಗಳು ಕೆಸರು ಗದ್ದೆಯಲ್ಲಿ ಎಷ್ಟು ಚುರುಕಿನಿಂದ ನೇಗಿಲನ್ನು ಎಳೆದಾವು? ಇಂತಹ ವ್ಯವಸಾಯಕ್ರಮದಲ್ಲಿ ಎಷ್ಟು ಹೆಚ್ಚು ಆಹಾರ ಬೆಳೆಯಬಹು? ಇಂತಹ ರೈತರೇ ಇದ್ದರೆ Grow more food ಗೆ ಬದಲು No more food ಆಗುತ್ತದೆ.

ಸಾವಿರಾರು ಎಕರೆ ಭೂಮಿ ಬೆಳೆ ಇಲ್ಲದೆ ಹಾಸಿತ್ತು. ಸರ್ಕಾರದವರೇ ಯಂತ್ರದಿಂದ ಬಾವಿಗಳನ್ನು ತೆಗೆಸಿ ಅಲ್ಲಲ್ಲಿ ವ್ಯವಸಾಯ ಕೇಂದ್ರಗಳನ್ನು ಮಾಡಬಹುದಾಗಿತ್ತು. ಇದರಿಂದ ಬಡವರಿಗೆ ಕೂಲಿಯೂ ದೊರೆಯುತ್ತಿತ್ತು. ಆಹಾರವನ್ನೂ ದೇಶಕ್ಕೆ ಒದಗಿಸಬಹುದಿತ್ತು. ತಾಳೆಗರಿಗಳಿಂದ ಕಟ್ಟಿದ್ದ ಬುಗುರಿ ಆಕಾರದ ಹರಿಜನರ ಗುಡಿಸಲುಗಳೇ ಆಗಾಗ್ಗೆ ಕಣ್ಣಿಗೆ ಬೀಳುತ್ತಿದ್ದುವು. ತಿರುವಲಂಗಾಡು ರೈಲ್ವೆ ನಿಲ್ದಾಣಕ್ಕೆ ಗಾಡಿ ಬಂದಿತೋ ಇಲ್ಲವೋ ನೂರಾರು ಹಾಲಿನ ಡಬ್ಬಗಳು ಪ್ರಯಾಣಿಕರ ಗಾಡಿಯೊಳಕ್ಕೆ ಒಂದರ ಮೇಲೊಂದು ನೂಕಲ್ಪಟ್ಟುವು. ಕುಳಿತಿದ್ದ ಪ್ರಯಾಣಿಕರಲ್ಲಿ ಕೆಲವರಿಗೆ ಕಾಲು ಬೆರಳುಗಳಿಗೆ ಪೆಟ್ಟು ಬಿದ್ದು ಹಾಲಿನ ಡಬ್ಬದ ಮಾಲೀಕರಿಗೂ, ಪೆಟ್ಟು ಬಿದ್ದ ಪ್ರಯಾಣಿಕರಿಗೂ ತಮಿಳು ಭಾಷೆಯಲ್ಲಿ ಬಿಸಿ ಬಿಸಿಯಾಗಿ ಒಂದು ಸಣ್ಣ ಯುದ್ಧವೇ ನಡೆದು ಹೋಯಿತು. "ನಾ ಪಾಕರೆ" ಎಂದು ಹಾಲಿನವನು ಮೀಸೆ ತಿರುವುತ್ತಿದ್ದ. "ನಾ ಪಾಕರೆ" ಎಂದು ಪ್ರಯಾಣಿಕ ಬೋಳಿಸಿದ್ದ ತನ್ನ ತುಟಿಯ ಮೇಲೆ ಸವರುತ್ತಿದ್ದ. ಹೀಗೆ ಯುದ್ಧ ಮುಗಿಯಿತು.

ನಾವು ಕುಳಿತಿದ್ದ ಪೆಟ್ಟಿಗೆ ಪ್ರಯಾಣಿಕರಿಂದ ತುಂಬಿಹೋಯಿತು. ಕಡಲೆಕಾಳು ಬಟಾಣಿ ಮಾರುವವರು ಪ್ರತಿಯೊಂದು ಪೆಟ್ಟಿಗೆಯಲ್ಲೂ

ಮೂರುನಾಲ್ಕು ಜನರಿದ್ದರು. ರೈಲು ಹೊರಟಿತು. ಹತ್ತು ಹದಿನಾರು ವಯಸ್ಸಿನ ಹರಯದ ಒಬ್ಬ ಹುಡುಗಿ ರೈಲು ಬಿರುಸಿನಿಂದ ಹೋಗುತ್ತಿದ್ದಾಗ ಕದ ತಳ್ಳಿಕೊಂಡು ಒಳಗೆ ನುಗ್ಗಿದಳು. ನನಗೆ ಆಶ್ಚರ್ಯವಾಯಿತು! ಗಾಡಿ ವೇಗದಿಂದ ಹೋಗುತ್ತಿರುವಾಗ ಟಿಕೆಟ್ ಚೆಕ್ ಮಾಡುವವನೂ ಕೂಡ ಒಂದು ಪೆಟ್ಟಿಗೆಯಿಂದ ಮತ್ತೊಂದು ಪೆಟ್ಟಿಗೆಗೆ ಹೋಗಲು ಹೆದರುತ್ತಾನೆ. ಈ ಹೆಣ್ಣಿನ ಧೈರ್ಯ ನೋಡಿ ಬೆರಗಾದೆ. ಹೆಂಗಸರನ್ನು ಅಬಲೆಯರೆನ್ನುತ್ತಾರೆ. ಸರಿಯಾದ ಶಿಕ್ಷಣದಿಂದ ಅಬಲೆಯರನ್ನೂ ಸಬಲೆಯರನ್ನಾಗಿ ಮಾಡಬಹುದು. ಹೆಂಗಸು ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡು ಇಂದ್ರಿಯಗಳನ್ನು ನಿಗ್ರಹಿಸಿದರೆ ಜಗನ್ಮಾತೆಯಾಗುತ್ತಾಳೆ. ಜನರಿಂದ ಪೂಜಿಸಲ್ಪಡುತ್ತಾಳೆ. ಅಸಾಧ್ಯವಾದ ಕಾರ್ಯಗಳನ್ನು ಸಾಧಿಸುತ್ತಾಳೆ. ಇದಕ್ಕೆ ರಾಮಕೃಷ್ಣಪರಮಹಂಸರ ಪತ್ನಿ ಶ್ರೀ ಶಾರದಾದೇವಿಯವರ ಜೀವನವೆ ನಮ್ಮ ಕಣ್ಣು ಮುಂದಿನ ಸಾಕ್ಷಿ. ಹೆಗಲು ಮೇಲಿಂದ ಇಳಿಬಿದ್ದಿದ್ದ ತನ್ನ ಸೆರಗನ್ನು ನಡುವಿಗೆ ಸುತ್ತಿಕೊಂಡು, ಕೈಯಲ್ಲಿದ್ದ ಮರದ ತಾಳಗಳನ್ನು ಬಾರಿಸುತ್ತಾ ತಮಿಳಿನಲ್ಲಿ ಮಧುರವಾಗಿ ಹಾಡತೊಡಗಿದಳು ಆ ಯುವತಿ. ಆ ಭಿಕ್ಷುಕಿಯ ಬಾಯಿಂದ ಹರಿಯುತ್ತಿದ್ದ ಗಾನಲಹರಿಯಲ್ಲಿ ನನ್ನ ತನುಮನಗಳೆರಡೂ ಕೊಚ್ಚಿ ಹೋದುವು. ಆ ಮಧುರಗಾನ ಕೆಲವು ಪ್ರಯಾಣಿಕರ ಆಯಾಸವನ್ನು ನೀಗಿತು. ಆ ಹುಡುಗಿ ಯಾಚಿಸಲು ಕೈ ನೀಡಿದಾಗ ಆ ಪೆಟ್ಟಿಗೆಯಲ್ಲಿ ಕುಳಿತಿದ್ದ ನಲವತ್ತು ಮಂದಿ ಪ್ರಯಾಣಿಕರಿಂದ ಒಂದು ಆಣೆಯೂ ಸಿಕ್ಕಲಿಲ್ಲ. ಪ್ರತಿಯೊಬರೂ ಬುಡುಬುಡಿಕೆ ಅಲ್ಲಾಡಿಸುವಂತೆ ಕೈ ಅಲ್ಲಾಡಿಸಿಬಿಟ್ಟರು. ಅಲ್ಲಿ ಎಷ್ಟೋ ಮಂದಿ ಶ್ರೀಮಂತರೂ ಕುಳಿತಿದ್ದರು. 'ಸಿರಿ ಬಂದ ಕಾಲಕ್ಕೆ ಕರೆದು ದಾನವಮಾಡು' ಎಂಬ ಸರ್ವಜ್ಞ ಮೂರ್ತಿಯ ತತ್ವ ಅವರನ್ನು ಮುಟ್ಟುವುದಕ್ಕೆ ಹೆದರುತ್ತಿತ್ತು. ಬಡತನದ ಬೇಗೆಯಿಂದ ಬೇಯುವಾಗ ಸಾಮಾನ್ಯ ಮನುಷ್ಯನಿಗೆ ಮಾನ ಅಪಮಾನಗಳ ಅರಿವಾಗದು. ಬಡತನ ಮನುಷ್ಯನಲ್ಲಿ ಸ್ವಾಭಾವಿಕವಾಗಿರುವ ಹುಮ್ಮಸ್ಸನ್ನೂ ಉತ್ಸಾಹವನ್ನೂ ಜ್ಞಾನವನ್ನೂ ಕುಗ್ಗಿಸಿ ಬಿಡುತ್ತದೆ. ತಿಳಿವಳಿಕೆಯಿಂದ ಅದನ್ನು ಸುಲಭವಾಗಿ ಜಯಿಸಬಹುದು. ಅಷ್ಟರಲ್ಲಿ ತ್ರಿವೆಲ್ಲೂರು ನಿಲ್ದಾಣಕ್ಕೆ ರೈಲು ಬಂದೇಬಿಟ್ಟಿತು. ಈ ಹುಡುಗಿ ಗಾಡಿ ನಿಲ್ಲುವುದಕ್ಕೆ ಮೊದಲೆ ಬೇರೆ ಬಾಗಿಲಿನಿಂದ ಚಂಗನೆ ಕೆಳಕ್ಕೆ ಹಾರಿ ಮಾಯವಾದಳು.

ತ್ರಿವೆಲ್ಲೂರು ಸಣ್ಣ ಗ್ರಾಮವಾದರೂ ನಾಜೋಕಾಗಿದೆ. ಇಲ್ಲಿಗೆ

ಎರಡು ಮೈಲಿ ದೂರದಲ್ಲಿ ವೀರರಾಘವಸ್ವಾಮಿ ದೇವಸ್ಥಾನವಿದೆ. ಪ್ರತಿ ಅಮಾವಾಸ್ಯೆಯ ದಿನ ಅಲ್ಲಿಗೆ ಯಾತ್ರಿಕರು ಬರುತ್ತಾರೆ. ಇಲ್ಲಿಂದ ವೆಲ್ಲೂರು ಮದ್ರಾಸಿಗೆ ಅನೇಕ ಬಸ್ಸುಗಳು ಹೋಗುತ್ತವೆ. ರೈಲು ಅಲ್ಲಿಂದ ಹೊರಟು ಆವಡಿ ನಿಲ್ದಾಣಕ್ಕೆ ಬಂದಿತು. ಒಬ್ಬ ಹೆಳವ, ಒಬ್ಬ ಕುಂಟ, ಒಬ್ಬ ಕುರುಡಿ, ಒಬ್ಬ ಕುರುಡ, ಇಬ್ಬರು ಕಿವುಡರು ಬಂದು ನಮ್ಮ ಗಾಡಿಯಲ್ಲಿ ತುಂಬಿ ಕೊಂಡರು. ನಾನು ಎಲ್ಲರನ್ನೂ ಚೆನ್ನಾಗಿ ನೋಡಿದೆ. ನಮ್ಮ ಸ್ನೇಹಿತರಿಗೆ ಹೇಳಿದೆ.“ ಒಬ್ಬ ಮೂಗಬಂದಿದ್ದರೆ ಬಹು ಚೆನ್ನಾಗಿತ್ತು” ಎಂದು. “ ಅಗೊ, ನೋಡಿ! ಮೂಗ ಗಾಡಿ ಹತ್ತುತ್ತಿದ್ದಾನೆ. ಸದಾ ಈ ದಾರಿಯಲ್ಲೆ ತಿರುಗಾಡು ವುದರಿಂದ ಭಿಕ್ಷುಕರ ಗುರುತೆಲ್ಲಾ ಇದೆ ನನಗೆ ” ಎಂದರು. ಎಲ್ಲರೂ ಬಿದ್ದು ಬಿದ್ದು ಕಾಸು ಬೇಡಲು ಶುರು ಮಾಡಿದರು. ಮದ್ರಾಸು ಪ್ರಾಂತ್ಯದ ಕಡೆ ಆಹಾರ ಬೆಳೆಯುವವರಿಗಿಂತ ಭಿಕ್ಷುಕರ ಸಂಖ್ಯೆ ಹೆಚ್ಚಾಗಿರುವಂತೆ ಕಾಣು ತ್ತಿತ್ತು. ಅನೇಕ ವಿದ್ಯಾರ್ಥಿಗಳು ಹಳ್ಳಿಗಳಿಂದ ಮದ್ರಾಸಿನ ಕಾಲೇಜುಗ ಳಿಗೆ ಹೋಗುತ್ತಿದ್ದರು. ಅವರೂ ತುಂಬಿಕೊಂಡರು. ನಮ್ಮ ಪೆಟ್ಟಿಗೆಯು ಜನ ರಿಂದ ಕಿಕ್ಕಿರಿದು ಹೋಯಿತು. ಆ ಬಿಸಿಲಿನ ಜಳದಲ್ಲಿಯೂ ವಿದ್ಯಾರ್ಥಿಗಳು ಬೆಲೆಬಾಳುವ ಉಣ್ಣೆಯ ಉಡುಪುಗಳನ್ನು ಧರಿಸಿದ್ದರು.

ಆವಡಿಯಿಂದ ಮದ್ರಾಸಿಗೆ ಹದಿನಾರು ಮೈಲಿ ದೂರವಿದೆ. ಕಳೆದ ಯುದ್ಧದಲ್ಲಿ ಈ ಊರ ಸುತ್ತಲೂ ಸೈನಿಕರ ಶಿಬಿರಗಳಿದ್ದುವು. ಶಿಬಿರಗಳ ಸುತ್ತಳತೆ ಹತ್ತು ಮೈಲಿಗೆ ಕಡಮೆ ಇಲ್ಲ. ಅಧಿಕಾರಿಗಳಿಗೂ ಸೈನಿಕರಿಗೂ ಕಟ್ಟಿದ ಮನೆಮಠಗಳು ಈಗಲೂ ಇವೆ. ಅದೊಂದು ಒಳ್ಳೆ ಫಲವತ್ತಾದ ಭೂಪ್ರದೇಶ. ಎರಡು, ಭಾರಿ ವ್ಯವಸಾಯ ಕೇಂದ್ರಗಳನ್ನು ಸ್ಥಾಪಿಸಿ, ಆಹಾರವನ್ನು ಬೆಳೆಯಲು ಅನುಕೂಲವಾಗಿದ್ದರೂ ಆ ಆವರಣವೆಲ್ಲ ಪಾಳು ಬಿದ್ದಿದೆ. ಜಾನುವಾರುಗಳಿಗೆ ಸೊಗಸಾದ ಹುಲ್ಲುಗಾವಲನ್ನು ಮಾಡಲು ಸಹ ಅನುಕೂಲವಾದ ಸ್ಥಳ ಅದು.

ನಮ್ಮ ಪಕ್ಕದ ಸೀಟಿಗೆ ಮೂರು ನಾಲ್ಕು ಜನ ಬಂದು ಕುಳಿತರು. ಅವರಲ್ಲಿ ಒಬ್ಬರು ಇಂಗ್ಲೀಷು ಪತ್ರಿಕೆಯೊಂದನ್ನು ಓದುತ್ತಿದ್ದು ತಮ್ಮ ಪಕ್ಕ ದಲ್ಲಿ ಕುಳಿತಿದ್ದವರ ಸಂಗಡ “ ರೇಡಿಯೊ ಬೆಲೆ ಇಳಿದು ಹೋಗಿದೆ ” ಎಂದು ಸಂತೋಷಪಟ್ಟುಕೊಂಡು ಹೇಳಿದರು.

“ ರೇಡಿಯೋ ಕಟ್ಟಿಕೊಂಡು ಯಾರು ಸಾಯುತ್ತಾರೆ! ತಿನ್ನುವ ಅನ್ನಕ್ಕೆ ಪೇಚಾಡುವ ಕಾಲದಲ್ಲಿ” ಎಂದರು ಪಕ್ಕದಲ್ಲಿದ್ದವರು. ಆ ಮಹಾನು

ಭಾವ ಮುಂಗೋಪಿ, ಅವರ ಮುಖ ನೋಡಿದರೆ ಹೇಳುತ್ತಿತ್ತು. ತರ್ಕಕ್ಕೆ ಎದೆತಟ್ಟಿಕೊಂಡು ನಿಂತೇಬಿಟ್ಟರು.

"ಅನ್ನ ಬಟ್ಟೆ ಎಷ್ಟು ಮುಖ್ಯವೋ ರೇಡಿಯೋ ಮತ್ತು ಯಂತ್ರಗಳ ಆವಶ್ಯಕತೆಯೂ ಅಷ್ಟೇ ಮುಖ್ಯವಾದುದು. ಹೊಟ್ಟೆ ಬಟ್ಟೆ ನೋಡಿ ಕೊಂಡರೆ ತೀರಿತೆ ಮನುಷ್ಯನ ಬಾಳು ? ಈ ಯಂತ್ರಯುಗದಲ್ಲಿ ಮನುಷ್ಯ ಇಡೀ ಜಗತ್ತನ್ನೇ ತನ್ನ ಕೈಗೆ ಎಟಕುವಂತೆ ಮಾಡಿದ್ದಾನೆ. ಇಂಗ್ಲೆಂಡು, ಅಮೆರಿಕ, ಜಪಾನ್, ಜರ್ಮನಿ ಯಾವ ದೇಶಗಳ ಸಮಾಚಾರವೇ ಆಗಲಿ, ಕೆಲವು ಘಂಟೆಗಳಲ್ಲೇ ನಮ್ಮ ಕಿವಿಯನ್ನು ಮುಟ್ಟುತ್ತವೆ. ಕೊರಿಯಾದಲ್ಲಿ ಯುದ್ಧ ನಡೆಯುತ್ತಿರುವ ಸಮಾಚಾರ ನಮಗೆ ಘಂಟೆ ಘಂಟೆಗೂ ರೇಡಿಯೊ ಮುಖೇನ ತಿಳಿಯುತ್ತದೆ. ಪರದೇಶಗಳಲ್ಲಿ ಯಾವುದಾದರೂ ಬ್ಯಾಂಕುಗಳು ದಿವಾಳಿಯಾದರೆ ನಮ್ಮ ದೇಶದ, ನಮ್ಮ ಊರಿನ ಬ್ಯಾಂಕಿನವರು ತಕ್ಷಣವೆ ಎಚ್ಚರಗೊಳ್ಳುತ್ತಾರೆ. ಒಂದು ದೇಶದ ಸ್ಥಿತಿಗತಿಗಳನ್ನು ಬಹುಬೇಗ ತಿಳಿದು ಕೊಳ್ಳಬಹುದು. ನೋಡಿ, ಸಾವಿರಾರು ಮೈಲಿಗಳಿರುವ ದೂರ ದೇಶಗಳಿಗೆ ವಿಮಾನದಲ್ಲಿ ಒಂದೆರಡು ದಿನಗಳಲ್ಲೆ ತಲಪಬಹುದು. ಇದೆಲ್ಲ ವಿಜ್ಞಾನದ ಫಲ. ಮನುಷ್ಯ ಎಷ್ಟು ಮುಂದುವರಿದ್ದಾನೆ! ಅದಕ್ಕೆ ಎಷ್ಟು ತಾರೀಪು ಮಾಡಿದರೂ ಸಾಲದು. ಮನುಷ್ಯ ತನ್ನ ಬುದ್ಧಿಶಕ್ತಿಯನ್ನು ಎಷ್ಟು ದೂರ ಬೆಳೆಸಿಕೊಂಡು ಹೋಗಿದ್ದಾನೆ. ನಮ್ಮ ಹಿರಿಯರು ಮೌಢ್ಯದಲ್ಲೆ ತಮ್ಮ ಬಾಳನ್ನು ಕಳೆದರು."

"ಈ ರೇಡಿಯೊ, ಕುಟ್ಟು ಬೀಸುವುದಕ್ಕೆ ಯಂತ್ರಗಳು ಬಂದು ನಮ್ಮ ದೇಶದ ಶಕ್ತಿಯೆಲ್ಲಾ ಹಿಂಗಿ ಹೋಯಿತು. ಜನರೂ ಕೂಡ ಯಂತ್ರ ಗಳಂತೆ ನಿರ್ಜೀವಿಗಳಾದರು. ಯಂತ್ರದ ಸಹಾಯಗಳಿಲ್ಲದಿದ್ದಾಗ ನಮ್ಮ ದೇಶದಲ್ಲಿ ತಿನ್ನುವುದಕ್ಕಿಲ್ಲದೆ ಎಷ್ಟು ಜನ ಸತ್ತಿದ್ದಾರೆ? ನಮ್ಮ ಮನೆಗಳಲ್ಲಿ ಹೆಂಗಸರು ತಾವೇ ಕುಟ್ಟಿ ಬೀಸಿಕೊಳ್ಳುತ್ತಿದ್ದುದರಿಂದ ಎಷ್ಟೋ ದೃಢಕಾಯ ರಾಗಿದ್ದರು. ಜನರು ಹತ್ತು ಹದಿನೈದು ಮೈಲಿಗಳನ್ನು ನಡೆದೇ ಹೋಗು ತ್ತಿದ್ದರು. ಅದರಿಂದ ಅವರ ದೇಹಶಕ್ತಿಯೂ ಹೆಚ್ಚುತ್ತಿತ್ತು. ಈಗಿನ ಕಾಲ ದಲ್ಲಿ ನೋಡಿ, ಒಂದು ಮೈಲಿ ದೂರವನ್ನು ನಡೆಯಲು ಶಕ್ತಿ ಇಲ್ಲದೆ ಮೋಟಾರಿಗೂ ಜಟಕಾಗಾಡಿಗಳಿಗೂ ಹೋಗುತ್ತಾರೆ. ದಿನಬೆಳಗಾದರೆ ನೆಗಡಿ ತಲೆನೋವು ಎಂದು ರಾಗ ತೆಗೆಯುತ್ತಾರೆ. ಯಾವ ಆಸ್ಪತ್ರೆಗಳಲ್ಲಿ ನೋಡಿ—ರೋಗಿಗಳು ತುಂಬಿದ್ದಾರೆ! ಯಾರ ಮುಖದಲ್ಲಿ ಕಾಂತಿ ಇದೆ?

ಈಗಿನ ಕಾಲದ ಜನರು ತಮ್ಮ ಬಾಳನ್ನು ಸರಾಗವಾಗಿ ಕೊನೆಮುಟ್ಟಿಸುವುದೆ ಅಪರೂಪ. ಈಗಿನ ಪೀಳಿಗೆ ಬರಬರುತ್ತಾ ಗಿಡ್ಡಾಗುತ್ತಿದ್ದಾರೆ; ನಿಶ್ಯಕ್ತ ರಾಗುತ್ತಿದ್ದಾರೆ. ನಮ್ಮ ಹಿಂದಿನ ಕಾಲದವರಲ್ಲಿ ರೋಗ ಎನ್ನುವುದೆ ಅಪ ರೂಪವಾಗಿತ್ತು. ಎಂದಿಗೊ ಅಕಸ್ಮಾತ್ತಾಗಿ ಜ್ವರ ಬಂದರೆ ಮೆಣಸಿನ ಸಾರು ಅನ್ನ ಊಟಮಾಡಿದರೆ ಮಾರನೆ ದಿನ ಜ್ವರ ಓಡಿ ಹೋಗುತ್ತಿತ್ತು. ಈಗಿನ ಕಾಲದಲ್ಲಿ ಊಟ ಹೇಗೊ ಔಷಧಿಯೂ ಹಾಗೆಯೇ; ದಿನಾಲು ಹೊಟ್ಟೆಗೆ ಬೀಳುತ್ತಿರಬೇಕು. ಪುರಾತನ ಭಾರತ ವರ್ಷವನ್ನು ತೆಗೆದುಕೊಳ್ಳಿ: ಶ್ರೀರಾಮನು ಎಷ್ಟು ವಿಶ್ವಾಸದಿಂದ ಪ್ರಜೆಗಳನ್ನು ಆಳಿದನು. ಹರಿಶ್ಚಂದ್ರ ನಂತಹ ಸತ್ಯಸಂಧನಾದ ಮಹಾರಾಜ ಈ ಜಗತ್ತಿನಲ್ಲೆ ಇದುವರೆಗೆ ಹುಟ್ಟಿಲ್ಲ. ಕೌರವ, ಭೀಮ, ಅರ್ಜುನರು ವೀರಾಧಿವೀರರು. ರನ್ನ, ಪಂಪ, ಕಾಳಿ ದಾಸರು ಮಹಾಕವಿಗಳು. ರಾಮಕೃಷ್ಣ ಪರಮಹಂಸರಂತಹ ಸರ್ವ ಧರ್ಮ ಸಮನ್ವಯಾಚಾರ್ಯರು ಮತ್ತಾವ ದೇಶದಲ್ಲಿ ಜನಿಸಿದ್ದರು? ಅವರು ತಮ್ಮ ಜೀವಮಾನಕಾಲದಲ್ಲಿ ಜನರಿಗೆ ಧರ್ಮಬೋಧನೆಯನ್ನು ಮಾಡಿದರು. ಜೀವನದಲ್ಲಿ ಸಾಕ್ಷಾತ್ಕಾರವನ್ನು ಪಡೆದು, ಅದನ್ನೂ ಲೋಕಕ್ಕೆ ಬೋಧಿಸಿದರು. ಅವರ ಶಿಷ್ಯರಾದ ಶ್ರೀಸ್ವಾಮಿ ವಿವೇಕಾನಂದರು, ನಮ್ಮನ್ನು ಅಲ್ಲಗಳೆಯುತ್ತಿದ್ದ ಪರಕೀಯ ದೇಶಗಳಲ್ಲಿ ಒಂದಾದ ಅಮೆರಿಕಾ (ಚಿಕಾಗೊ)ಕ್ಕೆ ಹೋಗಿ, ಪ್ರಪಂಚದಾದ್ಯಂತಬಂದು ಸೇರಿದ್ದ ಪಂಡಿತರ ಮುಂದೆ ಭಾರತದ ಆರ್ಯ ಸುಸಂಸ್ಕೃತಿಯನ್ನು ಎತ್ತಿ ಹಿಡಿದರು. ಅವರ ಜ್ಞಾನದ ಆಳವನ್ನು ನೋಡಿ ಅಲ್ಲಿ ನೆರೆದಿದ್ದ ಪಂಡಿತರೆಲ್ಲರೂ ಪೆಚ್ಚಾಗಿ ಹೋದರು. ಅರುಂಧತಿ, ಅಕ್ಕಮಹಾ ದೇವಿ, ಸಾವಿತ್ರಿ, ಸೀತೆ, ಶಾರದಾದೇವಿ, ಕಸ್ತೂರಿಬಾ' ನಮ್ಮ ದೇಶದ ಆದರ್ಶ ಸ್ತ್ರೀರತ್ನಗಳು. ಆ ಮಾತೆಯರ ಆದರ್ಶಜೀವನ ಯುಗ ಯುಗಾಂತರಗಳಿಂ ದಲೂ ನಮ್ಮ ಸ್ತ್ರೀಯರಿಗೆ ಕೈಗನ್ನಡಿ. ಝಾನ್ಸಿ ಮಹಾರಾಣಿ ಲಕ್ಷ್ಮೀ ಬಾಯಿಯು ಕೆಚ್ಚಿನಿಂದ ಪರಕೀಯರ ರಕ್ತದಲ್ಲಿ ತನ್ನ ಖಡ್ಗವನ್ನದ್ದಿ ಭಾರತ ಮಾತೆಯ ನೆಚ್ಚಿನ ಆದರ್ಶ ಮಗಳು ಎನ್ನಿಸಿಕೊಂಡಿದ್ದಾಳೆ. ಆಕೆಯ ಪರಾ ಕ್ರಮವನ್ನು ನೋಡಿ, ಕೇಳಿ ಪಾಶ್ಚಿಮಾತ್ಯರು ಆಶ್ಚರ್ಯದಿಂದ ಪೆಚ್ಚುಮೋರೆ ಹಾಕಿಕೊಂಡಿದ್ದಾರೆ.

"ನಮ್ಮವರು ಕಲೆಯಲ್ಲಿ ಯಾರಿಗೆ ತಾನೆ ಕಡಮೆ ಇದ್ದರು! ಎಲ್ಲೋರ ಅಜಂತ ಗುಹೆಗಳಲ್ಲಿನ ಸುಂದರ ಕಲಾಕೃತಿಯು ಪರಕೀಯರಿಗೆ ಮತ್ತು ನಮ್ಮ ಈಗಿನ ಜನಾಂಗದವರಿಗೆ ಆಶ್ಚರ್ಯವನ್ನುಂಟುಮಾಡುವಂತಿದೆ.

ಹಳೇಬೀಡು ಬೇಲೂರು ದೇವಸ್ಥಾನಗಳಲ್ಲಿನ ಕಲೆಯ ಕೌಶಲವನ್ನು ನೋಡಿ ಯಾರಿಗೆ ತಾನೆ ನಮ್ಮ ಆರ್ಯಸಂಸ್ಕೃತಿಯ ಜ್ಞಾಪಕವಾಗದು!"

"ನೀವು ಏನೇ ಹೇಳಿ ಸ್ವಾಮಿ, ಈಗಿನ ಕಾಲದ ಮನುಷ್ಯನ ಬುದ್ಧಿಯ ಮಟ್ಟಕ್ಕೆ ನಮ್ಮ ಹಿಂದಿನವರು ಬರಲಾರರು. ಗಗನದಲ್ಲಿ ಹಾರಿ ಹೋಗುವುದನ್ನು ನಮ್ಮ ಪೂರ್ವಿಕರಲ್ಲಿ ಯಾರಾದರೂ ಕಂಡುಹಿಡಿದಿದ್ದರೆ? ಎಂಥ ಆಶ್ಚರ್ಯಕರವಾದ ಜ್ಞಾನದ ಪ್ರಗತಿ ಅದು! ಒಂದು ಸಣ್ಣ ಅಣು ಬಾಂಬು ಒಂದೇ ಒಂದು ಘಳಿಗೆಯಲ್ಲಿ ಶತ್ರುರಾಜ್ಯವನ್ನು ನಾಶಮಾಡ ಬಲ್ಲದು. ಅದು ಎಂಥಾ ಅದ್ಭುತವಾದ ವಿಜ್ಞಾನಸಾಧನೆ! ಈಗಿನ ಕಾಲದ ಮಾನವನಲ್ಲಿರುವ ಜ್ಞಾನದ ಮಟ್ಟವೇನು! ನೀವು ಹೇಳುತ್ತಿರುವುದೇನು? ಎಲ್ಲಿಂದೆಲ್ಲಿಗೆ! ೧೮೯೭ ನೆಯ ನವೆಂಬರ್ ತಿಂಗಳಿನ ಏಳನೆಯ ದಿನ ಮ್ಯಾಡಂ ಕ್ಯೂರಿ ರೇಡಿಯಂ ಕಂಡುಹಿಡಿದಳು. ಆಕೆ ಪೋಲೆಂಡ್ ದೇಶದವಳು. ತಿಳಿಯಿತೇನ್ರಿ? ಎಂಥ ಅದ್ಭುತವಾದ ಸಂಶೋಧನೆಯನ್ನು ಮಾಡಿದ್ದಾಳೆ! ಇಂಡಿಯಾ ದೇಶದಲ್ಲಿ ವಿಜ್ಞಾನಪಥದಲ್ಲಿ ಸಂಶೋಧನೆ ನಡೆಸಿದ ಸ್ತ್ರೀಯರು ಯಾರಿದ್ದಾರೆ? ಬೆರಳು ಮಡಿಸಿ. ಪರದೇಶದವರೆಂದ ಮಾತ್ರಕ್ಕೆ ಅಲ್ಲಗಳೆಯ ಬಾರದು. ಅವರಲ್ಲಿರುವ ವಿಶೇಷ ಜ್ಞಾನಶಕ್ತಿಯನ್ನೂ ಆದರ್ಶಜೀವನವನ್ನೂ ಹಂಸಕ್ಷೀರನ್ಯಾಯದಂತೆ ತೆಗೆದುಕೊಳ್ಳಬೇಕು. ಅದನ್ನು ನಮ್ಮ ಸಂಸ್ಕೃತಿ ಜ್ಞಾನದ ಸಂಗಡ ಬೆರಸಬೇಕು. ಈಗ ನಾವುಗಳು ಆಧುನಿಕ ಪ್ರಪಂಚಕ್ಕೆ ಹೋಗಬಹುದು. ಮೇರಿಯು ಆದರ್ಶ ರಮಣಿಯೂ ಆಗಿದ್ದಳು. ೧೯೧೪–೧೮ರ ಯುದ್ಧದಲ್ಲಿ ರಣಭೂಮಿಯಲ್ಲಿ ಧೈರ್ಯದಿಂದ ಸುತ್ತಿ ಗಾಯಗೊಂಡ ಸೈನಿಕರಿಗೆ ಚಿಕಿತ್ಸೆಮಾಡಿದಳು. ಜಾರ್ಜ್ ಇಲಿಯಟ್ಟಳು ದೊಡ್ಡ ಕಾದಂಬರಿಕಾರಳು. ಷೇಕ್ಸ್‌ಪಿಯರ್, ಮಿಲ್‌ಟನ್, ವರ್ಡ್ಸ್‌ವರ್ತ್, ಕೀಟ್ಸ್ ಇವರೆಲ್ಲರೂ ಮಹಾ ಕವಿಗಳು. ಷೇಕ್ಸ್‌ಪಿಯರ್ ಮಹಾಕವಿಯ ಕೃತಿಗಳು ಲೋಕ ಪ್ರಸಿದ್ಧವಾಗಿವೆ. ಜನರು ಅವರವರ ಆರೋಗ್ಯ ಭಾಗ್ಯದ ಕಡೆ ಗಮನ ಕೊಡದಿದ್ದರೆ ವಿಜ್ಞಾನಿಗಳದೇನು ತಪ್ಪು? ಯಂತ್ರಯುಗವಾದರೇನು? ಮನುಷ್ಯ ತನ್ನ ಕರ್ತವ್ಯದ ಜವಾಬ್ದಾರಿಯನ್ನು ಅರಿತು ಕೆಲಸ ಮಾಡದೆ ಹೋದರೆ ಯಾವ ಯುಗವೂ ಒಂದೆ. ಹಸಿದ ಹೊಟ್ಟೆಗೆ ಆಹಾರ ಬೇಕಾಗುವಂತೆ ರೋಗ ಬಂದವನಿಗೆ ಔಷಧಿ ಬೇಕು. ಹಾಗೆಯೆ ಜ್ಞಾನಾರ್ಜನೆಗಾಗಿ ಹಾತೊರೆಯುವ ಮೆದುಳಿಗೆ ಜ್ಞಾನ ಬೇಕು. ನಮ್ಮ ಪೂರ್ವಿಕರು ಧರ್ಮ ಸಾಧನೆಯಿಂದ ಸಾಕ್ಷಾತ್ಕಾರವನ್ನು ಪಡೆದು ಲೋಕಕ್ಕೆ ಬೋಧಿಸಿದರು.

ವಿಜ್ಞಾನಿಗಳು ಸೃಷ್ಟಿಯ ಗರ್ಭದಲ್ಲಿ ಅಡಗಿರುವುದನ್ನು ಸಂಶೋಧಿಸುತ್ತಾರೆ. ಅದನ್ನು ಸಾಧಿಸಿದಹಾಗೆಲ್ಲ ಲೋಕಕಲ್ಯಾಣಕ್ಕೆ ಬೇಕಾದುದನ್ನು ಇಡೀ ಮಾನವರಿಗೆ ತಿಳಿಸುತ್ತಾರೆ."

"ಗಗನದಲ್ಲಿ ಹಾರಿಹೋದ ಮಾತ್ರಕ್ಕೆ ಮಾನವನ ಬಾಳು ಉನ್ನತ ಮಟ್ಟಕ್ಕೇರಿದೆಯೆ? ಮನುಷ್ಯ ದೇವರು ಕೊಟ್ಟ ಬುದ್ಧಿಶಕ್ತಿಯನ್ನು ಉಪಯೋಗಿಸಿ ವಿಜ್ಞಾನದ ಹಾದಿ ಹಿಡಿದಿದ್ದಾನೆ, ಅಷ್ಟೆ. ಆದರೆ ಅದನ್ನು ಮಾನವರ ಜೀವನದ ಉನ್ನತಿಗೆ ಉಪಯೋಗಿಸುವ ಬದಲು ವಿನಾಶಕ್ಕೆ ಉಪಯೋಗಿಸಿದರೆ ಅದರಿಂದ ಪ್ರಯೋಜನವೇನು ಬಂತು? ಅಣುಬಾಂಬು ಕಂಡು ಹಿಡಿಯಲ್ಪಟ್ಟಾಗಿನಿಂದ ಯಾವ ರಾಷ್ಟ್ರದ ಪ್ರಜೆಗೆ ತಾನೆ ಸುಖವಿದೆ. ಅದರ ಪ್ರಯೋಗದಿಂದ ಲೆಕ್ಕವಿಲ್ಲದಷ್ಟು ಜನ ನಾಶಹೊಂದಿದೆ. ಅದರ ಧೈರ್ಯದಿಂದ ಒಂದು ರಾಷ್ಟ್ರ ಮತ್ತೊಂದು ರಾಷ್ಟ್ರವನ್ನು ಉರುಳಿಸಲು ಕಾಲುಕೆರೆಯುತ್ತಿದೆ. ಮಾತೆತ್ತಿದರೆ ಅಣುಬಾಂಬನ್ನು ಪರ ರಾಷ್ಟ್ರಗಳು ಮುಂದೆ ಇಡುತ್ತವೆ. ವಿಜ್ಞಾನ ಮುಂದುವರಿಯುತ್ತಿರುವಂತೆಲ್ಲ ಪರ ರಾಷ್ಟ್ರಗಳಲ್ಲಿ ಪಾಳೆಯಗಾರತನ ಹೆಚ್ಚುತ್ತಿದೆ. ಪ್ರಜೆಗಳಲ್ಲಿ ಅತೃಪ್ತಿ, ಜೀವನದಲ್ಲಿ ಜಿಗುಪ್ಸೆ, ಹೋರಾಟ ಹೆಚ್ಚುತ್ತಿವೆ. ಉಣ್ಣುವ ಅನ್ನಕ್ಕೆ ಕುಕ್ಕೆ ಬಿದ್ದಿದೆ. ಬಡವ ಕಡು ಬಡವನಾಗುತ್ತಿದ್ದಾನೆ. ಐಶ್ವರ್ಯವಂತನ ಕಣಜಕ್ಕೆ ಮತ್ತಷ್ಟು ಐಶ್ವರ್ಯ ತುಂಬುತ್ತಿದೆ! ಶಕ್ತಿಯಿಂದ ಎಸೆದ ಚೆಂಡು ಎಷ್ಟು ದೂರ ಮೇಲಕ್ಕೆ ಹೋದರೂ ಪುನಃ ಅದು ಭೂಮಿಯ ಆಕರ್ಷಣ ಶಕ್ತಿಯಿಂದ ಕೆಳಗೆ ಬೀಳುವಂತೆ ಮನುಷ್ಯನ ವಿಜ್ಞಾನದ ಓಟ ಎಷ್ಟು ದೂರ ಹೋದೀತು? ದೇವರು ಮನುಷ್ಯನಿಗೆ ಗಾಳಿಯನ್ನು ಸ್ವಾಧೀನ ಮಾಡಿಕೊಟ್ಟಿದ್ದಾನೆಯೆ? ಹಾಗೆ ಮಾಡಿಕೊಟ್ಟಿದ್ದರೆ ಆ ಸೃಷ್ಟಿಕರ್ತನನ್ನೆ ಅಣುಬಾಂಬಿನಿಂದ ಸುಟ್ಟುಬಿಡುತ್ತಿದ್ದನೇನೊ, ವಿಜ್ಞಾನಿ!"

"ಇದಕ್ಕೆಲ್ಲ ದೇವರನ್ನು ಏತಕ್ಕೆ ಮಧ್ಯೆ ತರುತ್ತೀರಿ. ಜ್ಞಾನಕ್ಕೂ ಆ ದೇವರಿಗೂ ಸಂಬಂಧ ಕಲ್ಪಿಸುವ ಆವಶ್ಯಕತೆ ಎಲ್ಲಿ ಬಂತು ಈಗ?"

"ದೇವರಿಲ್ಲದೆ ನಿಮ್ಮ ವಿಜ್ಞಾನ ಹೇಗೆ ಬಂತು, ಸ್ವಾಮಿ. ಆತನು ಮಾನವನಲ್ಲಿ ಜ್ಞಾನಶಕ್ತಿಯನ್ನು ತುಂಬಿರುವುದರಿಂದಲೆ ಈ ಸಾಧನೆಗಳನ್ನು ಮನುಷ್ಯ ಕಂಡುಹಿಡಿದದ್ದು. ಆ ಜಗನ್ನಾಯಕನು ಮನುಷ್ಯನಿಗೆ ಎಷ್ಟು ಜ್ಞಾನ ಬೇಕೊ ಅಷ್ಟನ್ನು ಮಾತ್ರ ಅವನ ಹಿಡಿತಕ್ಕೆ ಕೊಟ್ಟಿದ್ದಾನೆ. ಹಾಗಲ್ಲದಿದ್ದರೆ ಭೂಮಿಗೂ ಆಕಾಶಕ್ಕೂ ಇರುವ ಅಂತರವೇನೆಂಬುದನ್ನು ನಿಮ್ಮ

ವಿಜ್ಞಾನಿಗಳು ಇಷ್ಟರಲ್ಲೇ ಗಜಗಡ್ಡಿಯಿಂದ ಅಳೆದು ಬಿಡುತ್ತಿದ್ದರು. ಸಕಲ ಜಲಚರಗಳಿಗೂ ಪ್ರಾಣವಾದ ವಾಯುವು ಕಾಣದ, ಹಿಡಿತಕ್ಕೆ ಸಿಕ್ಕದ ವಸ್ತುವಾಗಿ ಹೇಗಿದೆ ನೋಡಿ! ಈ ನೀಲಾಕಾಶ ಎಷ್ಟು ವಿಶಾಲವಾಗಿದೆ! ಏನು ಚಮತ್ಕಾರದಿಂದ ಭಗವಂತನು ಇದನ್ನು ಸೃಷ್ಟಿಸಿದ್ದಾನೆ! ನಾವೆಲ್ಲರೂ ಆತನ ಸೂತ್ರದ ಗೊಂಬೆಗಳು. ಜೀವನ—ನೀರಿನ ಮೇಲೆ ತೇಲಿಬರುವ ಗುಳ್ಳೆಯಂತೆ; ಯಾವಾಗ ಹಾರಿಹೋಗುತ್ತದೆಯೊ! ಯಾವ ವಿಜ್ಞಾನಿಯ ಕೈಹಿಡಿತಕ್ಕೆ ಸಿಕ್ಕಿದೆ ಜೀವ? ಈ ಭೂಮಿ ಆಕಾಶಗಳು ಅವನ ಸೂತ್ರದಿಂದ ತೇಲಾಡುತ್ತ ನಿಂತಿವೆ."

ಈ ಪ್ರಯಾಣಿಕರ ವಾದವಿವಾದವನ್ನು ನಾನು ಮತ್ತು ನನ್ನ ಸ್ನೇಹಿತರೂ ಕಿವಿ ನೆಟ್ಟಗೆ ಮಾಡಿಕೊಂಡು ಕೇಳುತ್ತಿದ್ದೆವು. ಕೊನೆಗೆ ಇಬ್ಬರ ತರ್ಕವೂ ನಿಂತಿತು.

ರೈಲು ಹತ್ತು ಘಂಟೆಗೆ ಸರಿಯಾಗಿ ಪೆರಂಬೂರಿಗೆ ಬಂದಿತು. ಅಷ್ಟರಲ್ಲಿ ಪ್ರಯಾಣಿಕರ ದೃಷ್ಟಿಯೆಲ್ಲ, ವಿಶಾಲವೂ ಗಜಿಬಿಜಿಯಾದುದೂ ಆದ ಮದ್ರಾಸು ಪಟ್ಟಣದ ಕಡೆ ಕೇಂದ್ರೀಕರಿಸಿತು. ಪೆರಂಬೂರಿನಲ್ಲಿ ಒಂದು ದೊಡ್ಡ ರೈಲ್ವೆ ಶಿಕ್ಷಣಶಾಲೆ ಇದೆ. ಆರೇಳು ಅಡಿ ಎತ್ತರ ವಿಶಾಲವಾದ ಗೋಡೆ ಅದರ ಸುತ್ತಲೂ ಇದೆ.

ಗಾಡಿ ಹತ್ತೂವರೆ ಘಂಟೆಗೆ ಮದ್ರಾಸು ಕೇಂದ್ರ ರೈಲ್ವೆ ನಿಲ್ದಾಣಕ್ಕೆ ಬಂದಿತು. ಭೀಮಾಕಾರದ ಉಕ್ಕಿನ ಕಂಬಗಳ ಮೇಲೆ ನಿಂತಿರುವ ಕಟ್ಟಡಗಳು, ಹೊಗೆಯನ್ನು ಬುಗ್ ಬುಗ್ ಎಂದು ಆಕಾಶಕ್ಕೆ ಉಗುಳುತ್ತ, ಭೂತಗಳಂತೆ ನಿಂತಿದ್ದ ರೈಲ್ವೆ ಎಂಜಿನ್‌ಗಳೂ—ಇಂಡಿಯಾ ದೇಶದ ನಾನಾ ಕಡೆಗಳಿಗೆ ಹೊರಡಲು ಘಂಟೆಯ ಧ್ವನಿಯನ್ನು ಕಾದು ಸಿದ್ಧವಾಗಿ ನಿಂತಿದ್ದ ರೈಲುಗಳೂ, ನೆಂಟರಿಷ್ಟರನ್ನೂ ಮಿತ್ರರನ್ನೂ ಭೇಟಿಮಾಡಲು ಬಂದಿದ್ದ ಜನರ ತಂಡಗಳೂ—ರೈಲ್ವೆ ನೌಕರರ ಓಡಾಟ—ಎಲ್ಲವೂ ಒಂದು ವಿಚಿತ್ರವಾಗಿ ಕಂಡವು.

ಮದ್ರಾಸಿನಲ್ಲಿದ್ದ ನನ್ನ ಬಂಧುಗಳಿಗೆ ನಾನು ತಿರುಪತಿಯಿಂದಲೆ ಕಾಗದ ಬರೆದಿದ್ದೆ—ರೈಲ್ವೆ ನಿಲ್ದಾಣಕ್ಕೆ ಬನ್ನಿ, ಎಂದು. ಅವರಾರೂ ಬಂದಿರಲಿಲ್ಲ. ನಮಗೆ ಆಶಾಭಂಗವಾಯಿತು ಮತ್ತು ಪೇಚಾಟಕ್ಕೂ ಇಟ್ಟುಕೊಂಡಿತು. ನಮ್ಮ ಅಯ್ಯಂಗಾರ್ಯರೂ ಅವರ ಪತ್ನಿಯೂ ವಿಶ್ವಾಸದಿಂದ "ಹೋಗಿಬರುತ್ತೀರಾ, ನೆನಪಿರಲಿ" ಎಂದು ಬೀಳ್ಕೊಟ್ಟರು. ರೈಲ್ವೆ ನಿಲ್ದಾಣದ

ಮುಂಭಾಗದಲ್ಲಿ ಸ್ವಲ್ಪ ಹೊತ್ತು ದಿಕ್ಕು ತೋಚದೆ ನಿಂತೆವು. ಏಕೆಂದರೆ ಅವರ ಮನೆಗೆ ಇದೇ ಮೊದಲು ನಾವು ಹೋಗುತ್ತಿರುವುದು. ಬಹಳ ಹೊತ್ತಿನ ಮೇಲೆ ನಿಲ್ದಾಣದಿಂದ ಹೊರಬಿದ್ದೆವು. ಮದ್ರಾಸಿಗೆ ನಾವು ಹೊಸಬರೆಂಬುದನ್ನು ಅಲ್ಲಿನ ಕೂಲಿಕಾರರು ನಮ್ಮ ಮುಖಚರ್ಯೆಯಿಂದಲೆ ತಿಳಿದುಕೊಂಡು ಜೇನುಹುಳುಗಳು ಮುತ್ತಿದಂತೆ ಮುತ್ತಿದರು, "ರಿಕ್ಷಾ ಇರಕದು ವಾಂಗೊ—ಟಾಂಗಾ ಇರಕದು ವಾಂಗೊ—ಬಂಡಿ ಇರಕದು ವಾಂಗೊ" ಎಂದು. ನಾನು "ನಡದೇ ಹೋಗುತ್ತೇವೆ, ಬೇಡ" ಎಂದೆ. ಆದರೂ ಒಂದು ಫರ್ಲಾಂಗು ದೂರದವರೆಗೆ ನಮ್ಮನ್ನು ಕಾಡಿದರು. ಕೊನೆಗೆ ತಮಿಳಿನಲ್ಲಿ ಹಾಗೆ ಹೀಗೆ ಅಂದುಕೊಂಡು, ನಿರಾಶೆಯಿಂದ ಮುಖ ಕೊಕ್ಕರಿಸಿಕೊಂಡು, ಒಬ್ಬೊಬ್ಬರಾಗಿ ಹಿಂದಿರುಗಿದರು. ದಾರಿಯಲ್ಲಿ ಸಿಕ್ಕಿದ ಕೆಲವರನ್ನು ವಿಚಾರಿಸಿದೆ, ಗೋವಿಂದಪ್ಪನಾಯ್ಕನ ಬೀದಿ ಯಾವುದೆಂದು. ಕೆಲವರಿಗೆ ಕನ್ನಡ ಬಾರದು, ನನಗೆ ತೆಲುಗು ಬಾರದು. ಎಲ್ಲೆಲೋ ದಾರಿ ತೋರಿದರು. ನಾವು ನಾಲ್ಕೈದು ರಸ್ತೆಗಳನ್ನು ಬಳಸಿಕೊಂಡು, ಜನರ ಗುಂಪಿನಲ್ಲಿ ನುಸಿದು ಹೋದೆವು.

## ೫. ಮದ್ರಾಸಿನಲ್ಲಿ

ನಮ್ಮ ಬಂಧುಗಳ ವಿಳಾಸ ಗೊತ್ತಿದ್ದುದರಿಂದ ಮನೆಯನ್ನು ಪತ್ತೆ ಹಚ್ಚಿದೆವು. ತಂಡೋಪತಂಡ ಜನ, ಒಂದರ ಮೇಲೊಂದು ಓಡುತ್ತಿದ್ದ ವಿದ್ಯುಚ್ಛಕ್ತಿಯ ಗಾಡಿಗಳು, ಟಾಂಗಾಗಳೂ ಮೋಟಾರುಗಳು! ಅದೇನು ಗಜಿಬಿಜಿ, ಅದೇನು ನೂಕು ನುಗ್ಗಲು! ಆ ಜನವೆಲ್ಲ ಹೇಗೆ ವಾಸಿಸುತ್ತಾರೊ!—ಅವರಿಗೆ ಹೇಗೆ ಶಾಂತಿ ದೊರಕುತ್ತೊ ಭಗವಂತನಿಗೇ ಗೊತ್ತು. ಈ ಗೊಂದಲದಿಂದ ತುಂಬಿದ ನಗರ ಜೀವನಕ್ಕಿಂತ ನಿರ್ಜನವಾದ ಅಡವಿಯೆ ಲೇಸು. ಅಲ್ಲಿ ಪ್ರಕೃತಿಯನ್ನಾದರೂ ನೋಡುತ್ತ ಶಾಂತಿಯಿಂದಿರಬಹುದು. ನಮಗೆ ಮನೆ ತಲಪುವಷ್ಟರಲ್ಲೆ ಮೈಯೆಲ್ಲಾ ಉರಿಯುತ್ತಿತ್ತು. ಮದ್ರಾಸಿನ ಹವ ಕೇಳಬೇಕೆ! ಬಿಸಿ ಗಾಳಿ ಬೀಸುತ್ತಲೆ ಇತ್ತು. ನಮ್ಮ ಬಂಧುಗಳು ನಮ್ಮನ್ನು ಕಾಣುತ್ತಲೆ ಬಹಳ ವಿಶ್ವಾಸದಿಂದ "ಓ! ಬನ್ನಿ ಬನ್ನಿ, ಅಪರೂಪವಾಗಿ ಬಂದಿರಿ. ನಮಗೆ ಬರೆದಿದ್ದರೆ ನಿಲ್ದಾಣಕ್ಕೆ ಬರುತ್ತಿದ್ದೆವು" ಎಂದು ಹೇಳಿ ಸ್ವಾಗತಿಸಿದರು. ಹೋದಕೂಡಲೆ ಮೂವರೂ

ತಣ್ಣೀರು ಸ್ನಾನ ಮಾಡಿದೆವು. ಒಂದಷ್ಟು ಬಾಳೆಹಣ್ಣು, ಕಾಫಿ ತರಿಸಿ ಕೊಟ್ಟರು ಸಿಂಗ್ರಪ್ಪನವರು, ಲಕ್ಷ್ಮಿಯ ಚಿಕ್ಕಪ್ಪ. ಸ್ವಲ್ಪ ಹೊತ್ತಿನ ನಂತರ ಊಟಮಾಡಿ ಕೊಂಚ ನಿದ್ದೆಮಾಡಿದೆವು.

ನಾಲ್ಕು ಘಂಟೆಯುವರೆಗೆ ವಿಶ್ರಮಿಸಿಕೊಂಡನಂತರ ನಮ್ಮ ಬಂಧುಗಳ ಜೊತೆಯಲ್ಲಿ ಮೂರ್‌ಮಾರ್ಕೆಟ್‌ಗೆ ಹೊರಟೆವು. ಬಿಸಿಲಿನ ಜಳ ಸಹಿಸಲಸಾಧ್ಯ ವಾಗಿತ್ತು. ಜನರ ನೂಕಾಟಬೇರೆ. ಒಳಗೆ ನುಗ್ಗುವ ಮುಂಧಾಗದಲ್ಲೆ ಒಡವೆ ವಸ್ತುಗಳ ಅಂಗಡಿಗಳು ಪೆಟ್ಟಿಗೆಗಳಂತೆ ಸಾಲುಸಾಲಾಗಿ ಜೋಡಿಸಿದ್ದುವು. ಮತ್ತೊಂದು ದಿಕ್ಕಿನ ಹೊರ ಅಂಗಣದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದ ಪುಸ್ತಕ ಭಂಡಾರದ ಅಂಗಡಿಗಳು ಅನೇಕವಿದ್ದುವು. ಪ್ರಪಂಚದ ಎಲ್ಲ ಕವಿಗಳ ಕಥೆ, ಕವನ, ವಿಮರ್ಶೆ, ನಾಟಕಗಳೂ ಅಲ್ಲಿದ್ದುವು. ಕೊಂಚ ಮುಂದೆ ನುಗ್ಗಿದೆವು. ನಾನಾವರ್ಣದ, ಗಾತ್ರದ ಗಿಳಿಗಳೂ, ಗೊರವಂಕನಹಕ್ಕಿ, ತೋಲಿಹಕ್ಕಿ, ಗೌಜಲಹಕ್ಕಿ, ಕಾಡಹಕ್ಕಿ, ಚಿಪಲೇಹಕ್ಕಿ, ಲಾವಿಗನಹಕ್ಕಿ, ಬಾವಲಿ, ಕೋಳಿ, ಕೊಕ್ಕರೆ, ಬಾತು, ಕೆಂಬೂತ, ಪಾರಿವಾಳ ಮುಂತಾದ ಪಕ್ಷಿಗಳೂ ಹಾವು, ಆಮೆ, ಅಳಿಲು, ಕೋತಿ, ಕೀರ, ಕರಡಿ, ಮೊಲ— ಇನ್ನೂ ಏನೇನೋ ಜಾತಿಯ ಮೃಗಗಳೂ ಅಲ್ಲಿ ಮಾರಾಟಕ್ಕಿದ್ದುವು. ಮತ್ತೊಂದು ಸಾಲಿನಲ್ಲಿ ನಾನಾ ಜಾತಿಯ ಹಣ್ಣುಹಂಪಲಗಳು ತರ ಕಾರಿಗಳೂ ಅಂಗಡಿಗಳಲ್ಲಿ ಜನರ ಮನಸೆಳೆಯುವಂತೆ ಸಾಲು ಸಾಲಾಗಿ ಜೋಡಿಸಲ್ಪಟ್ಟಿದ್ದುವು. ಕಬ್ಬಿಣ ಕಡಿಮುಟ್ಟಿನ ಸಾಮಾನುಗಳಂತೂ ರಾಶಿ ರಾಶಿಯಾಗಿ ಬಿದ್ದಿದ್ದವು. ಮತ್ತೊಂದು ಕಡೆ ಉಪಯೋಗಿಸಿದ ಉಲ್ಲನ್ ಕೋಟುಗಳೂ ಹ್ಯಾಟುಗಳೂ ನಾನಾ ತರಹ ಬಟ್ಟೆಬರೆಗಳೂ ಸೀರೆಗಳೂ ಮಾರಲ್ಪಡುತ್ತಿದ್ದುವು. ನಿಜಕ್ಕೂ ಅದೊಂದು ವಿಚಿತ್ರ ವಸ್ತುಪ್ರದರ್ಶನ ಶಾಲೆಯಂತಿತ್ತು. ಸಾಯಂಕಾಲ ಏಳೂವರೆ ಘಂಟೆಗೆ ಅಲ್ಲಿಂದ ಹೊರಟು ಕೆಂಪು ಬಣ್ಣ ಬಳಿದಿದ್ದ ಎತ್ತರವಾದ ಲೈಟ್ ಹೌಸ್ ಕಟ್ಟಡಕ್ಕೆ ಬಂದೆವು. ಅದರ ಮೇಲೆ ಹತ್ತಿ ಸುತ್ತಲೂ ವಿಶಾಲವಾಗಿ ಹಬ್ಬಿರುವ ಪಟ್ಟಣವನ್ನೂ ಸಮುದ್ರವನ್ನೂ ನೋಡಿದೆವು.

ದೊಡ್ಡ ದೊಡ್ಡ ಬೀದಿಗಳಲ್ಲಿ 'ನಳ್ಳಿ ಹೊಟ್ಟೆಯಲ್ಲಿ ಮರಿ ಸಿಕಿಗುಟ್ಟು ವಂತೆ' ಜನಸಂದಣಿ ಪಿತಿಗುಟ್ಟುತ್ತಿತ್ತು. ಇದರ ಮೇಲೆ ಒಂದರ ಹಿಂದೆ ಒಂದು ಓಡೋಡಿ ಬರುತ್ತಿರುವ ವಿದ್ಯುಚ್ಛಕ್ತಿಯ ಮೋಟಾರುಗಳ ಓಡಾಟ ಬೇರೆ. ಮದ್ರಾಸಿನಲ್ಲಿ ಒಂದು ವಿಶೇಷ ವಿಚಿತ್ರವೇನೆಂದರೆ: ಜನರನ್ನು

ಕೋಚ್ ಗಾಡಿಯ ಮೇಲೆ ಕೂಡಿಸಿಕೊಂಡು ಎಳೆದುಕೊಂಡು ಹೋಗುವ ಕರಿಯ ದೇಹದ ಅರೆಬೆತ್ತಲೆಯ ದರಿದ್ರರು. ಇಂಥ ಕೋಚ್‌ಗಳು ಸಾವಿರಾರು ಗಟ್ಟಲೆ ಇವೆ. ಮಳೆ ಸುರಿಯುತ್ತಿರಲಿ, ಬಿಸಿಲು ಎರಚುತ್ತಿರಲಿ, ಆ ಜೀವಿಗಳು ಮಾತ್ರ ಬರಿ ಒಂದಾಣೆ ಎರಡಾಣೆಗೆ ಕೋಚ್ ಗಾಡಿಯನ್ನು ಎಳೆದುಕೊಂಡು ಓಡುತ್ತಿರುತ್ತಾರೆ. ಎತ್ತು ಕುದುರೆಗಳಿಗೆ ಬದಲಾಗಿ ಈ ಮಾನವರನ್ನು ಮದ್ರಾಸಿನ ನಾಗರೀಕರು ಏಕೆ ಉಪಯೋಗಿಸುತ್ತಾರೊ ಏನೊ, ಅದು ಮಾತ್ರ ತಿಳಿಯದು. ಇವರಿಗೆ ಮುನಿಸಿಪಾಲಿಟಿಯಿಂದ ಲೈಸೆನ್ಸ್ ಬ್ಯಾಡ್ಜ್ ಕೊಟ್ಟಿದ್ದಾರೆ. ನಗರಾಡಳಿತದವರೆ ಲೈಸೆನ್ಸ್ ಕೊಡುವುದರ ಮೂಲಕ ಉತ್ತೇಜನ ಕೊಡುತ್ತಿರುವುದು ಒಂದು ಶೋಚನೀಯವಾದ ಸಂಗತಿ! ಆ ಚಿಂತಾಜನಕ ಸ್ಥಿತಿಯನ್ನು ನೋಡಿ ನನಗೆ ಏನೊಂದೂ ತೋಚಲಿಲ್ಲ. ನಾಗರಿಕ ಮಾನವರು ಮಾನವ ಸಹೋದರರ ಈ ಸ್ಥಿತಿಯನ್ನು ಸುಲಭವಾಗಿ ತಪ್ಪಿಸಬಹುದಲ್ಲ ಎಂದುಕೊಂಡೆ. ನನ್ನ ಪ್ರಲಾಪವನ್ನು ಕೇಳುವವರಾರು? ಅವರ ಸ್ಥಿತಿಗತಿಗಳನ್ನು ನೋಡಬೇಕೆಂದು ಕೆಲವು ಕಡೆ ಹೊರಟೆವು. ಅಂಗಡಿಗಳ ಸಂದಿಗೊಂದಿಗಳಲ್ಲಿ ಅಲ್ಲಲ್ಲೆ ಅಂಬಲಿ, ಗಂಜಿ, ರೊಟ್ಟಿಯನ್ನು ಹರಿಜನ ಸ್ತ್ರೀಯರು ಬೇಯಿಸಿಕೊಳ್ಳುತ್ತಿದ್ದರು. ಅವರ ಉಡಿಗೆತೊಡಿಗೆಗಳಂತೂ ಹೇಳತೀರದು. ಆ ಶರೀರಗಳು ಎಂದು ಬೇಕಾದನ್ನುಟ್ಟು, ಒಳ್ಳೆಯದನ್ನುಂಡು ಸಂತೋಷದಿಂದ ನಲಿದಾವೊ ಭಗವಂತನಿಗೇ ಗೊತ್ತು! ಅವರ ರೂಪು ಇಂಡಿಯಾ ದೇಶದಲ್ಲಿ ಕುರೂಪಿಗಳ ಸ್ಪರ್ಧೆಯನ್ನಿಟ್ಟರೆ ಮೊಟ್ಟಮೊದಲ ಬಹುಮಾನ ಅವರಿಗೆ ಮೀಸಲು. ಮಳೆ ಬಾರದಿದ್ದ ದಿನ ಆಕಾಶವೆ ಚಪ್ಪರದಂತಿರುವ ಭೂಮಿಯ ಮೇಲೆ ನಿದ್ದೆ. ಮಳೆ ಗಾಳಿ ಬಂದಾಗ ಯಾವುದಾದರು ಚಾವಡಿಗಳಲ್ಲಿ ಹಳೆ ಕಂಬಳಿ ಹೊದೆದು, ಕೋಚ್ ಗಾಡಿಯನ್ನು ಮುಂದೆ ನಿಲ್ಲಿಸಿಕೊಂಡು, ಮಕ್ಕಳು ಮರಿಗಳನ್ನು ಸುತ್ತಲೂ ಕೆಡವಿಕೊಂಡು ಬಿದ್ದುಕೊಳ್ಳುವರು. ಇಂಥ ಹರಿಜನರ ಸಂಸಾರಗಳು ಲಕ್ಷಗಟ್ಟಲೆ ಇದ್ದುವು. ಅಂದಿನ ರಾತ್ರೆ ನನಗೆ ನಿದ್ದೆ ಹತ್ತಲೆ ಇಲ್ಲ. ನನ್ನ ಜನ್ಮದಲ್ಲೆ ಅನುಭವಿಸಿರಲಿಲ್ಲ ಅಂತಹ ಸೆಕೆಯನ್ನು. ರಂಗಸ್ವಾಮಿಯಂತು ಬರಿ ಮೈಯಲ್ಲಿ ಮಿಲಮಿಲನೆ ಒದ್ದಾಡುತ್ತಿದ್ದ.

ಬೆಳಗಾಗುವುದರಲ್ಲೆ ಪಟ್ಟಣದ ನಿರ್ಜೀವ ಜೀವನದ ಗೊಂದಲ ಪ್ರಾರಂಭವಾಯಿತು. ನಾವು ಫಲಾಹಾರ ಮುಗಿಸಿಕೊಂಡು ಮೈಲಾಪುರದಲ್ಲಿರುವ ಈಶ್ವರ ದೇವಸ್ಥಾನವನ್ನು ನೋಡಲು ಎಂಟು ಗಂಟೆಗೆ ಹೊರಟೆವು.

ಹೋಗುವಾಗ ಆಸ್ಪತ್ರೆಯನ್ನೂ ಮತ್ತು ಭೀಮಾಕಾರವಾಗಿದ್ದ ರೈಲ್ವೆ ಕಛೇರಿ ಯನ್ನೂ ನೋಡಿದೆವು. ಅಲ್ಲಿಂದ ಮುಂದೆ ಟ್ರಾಮ್‌ನಲ್ಲಿ ಮೈಲಾಪುರಕ್ಕೆ ಹೋದೆವು. 'ಟ್ರಾಂ'ಗೆ ಛಾರ್ಜು ಬಹಳ ಕಡಮೆ. ಒಂದಾಣೆಗೆ ಎರಡು ಮೈಲಿ ದೂರ ಹೋಗಬಹುದು. 'ಟ್ರಾಂ'ಗಳು ದೊಡ್ಡ ಮೋಟಾರು ಲಾರಿ ಇದ್ದ ಹಾಗೆ; ಕಬ್ಬಿಣದ ಚಕ್ರಗಳಿವೆ ರೈಲಿಗಿರುವಂತೆ. ವಿದ್ಯುಚ್ಛಕ್ತಿಯ ತಂತಿಗಳನ್ನು ರಸ್ತೆಯ ಉದ್ದಕ್ಕೂ ಹದಿನೈದು ಅಡಿ ಎತ್ತರದಲ್ಲಿ ಹಾಕಿ ದ್ದಾರೆ. ಈ 'ಟ್ರಾಂ'ಗಾಡಿಯ ಮೇಲೆ ಒಂದು ಕೊಕ್ಕೆಯ ಹಾಗೆ ಇಟ್ಟಿ ದ್ದಾರೆ. ಅದನ್ನು ಮೇಲೆ ಹಾಕಿರುವ ತಂತಿಗಳಿಗೆ ತಗಲಿಸಿಬಿಡುತ್ತಾರೆ. ಆಗ ರಸ್ತೆಯಲ್ಲಿ ಹಾಕಿರುವ ಕಬ್ಬಿಣದ ಕಂಬಿಗಳ ಮೇಲೆ ಅದು ದಡದಡನೆ ಶಬ್ದ ಮಾಡುತ್ತಾ ಬಹು ವೇಗವಾಗಿ ಹೋಗುತ್ತದೆ. ಮೂರು ನಾಲ್ಕು ಫರ್ಲಾಂಗು ದೂರಕ್ಕೆ ಒಂದೊಂದು ಕಡೆ ನಿಲ್ಲುತ್ತದೆ. ನಿಲ್ಲಿಸಬೇಕಾದಾಗ 'ಟ್ರಾಂ'ನ ಮೇಲಿನ ಕೊಕ್ಕೆಯು ಎಲೆಕ್ಟ್ರಿಕ್ ತಂತಿಯನ್ನು ಸೋಕದಂತೆ ಮಾಡಿದರೆ 'ಟ್ರಾಂ' ನಿಲ್ಲುತ್ತದೆ

ದೇವಸ್ಥಾನದ ಪಶ್ಚಿಮ ದಿಕ್ಕಿನ ಬಾಗಿಲಿನ ಮುಂದೆ ವಿಶಾಲವಾದ ಕಲ್ಯಾಣಿ ಇದೆ. ಪೂರ್ವ ದಿಕ್ಕಿನ ಕಡೆ ದೊಡ್ಡ ಗೋಪುರವಿದೆ. ಅದರ ಮೇಲೆ ಭಾರತ, ರಾಮಾಯಣದ ವ್ಯಕ್ತಿಗಳನ್ನು ಕೆತ್ತಿದೆ. ಆ ಬೊಂಬೆಗಳು ಬೊಂಬೆ ಗಳಂತಿಲ್ಲ; ಸಜೀವವಾಗಿ ಭಾರತ ರಾಮಾಯಣವನ್ನೇ ಹೇಳುತ್ತಿವೆ. ಆ ಕಲಾ ಸೌಂದರ್ಯ ಪ್ರೇಕ್ಷಕರಾದ ನಮ್ಮ ಮನಸ್ಸನ್ನು ಸೂರೆಮಾಡಿತು. ನೋಡುತ್ತ ನಿಂತೆವು. ಎರಡು ಕಣ್ಣುಗಳೂ ಸಾಲಲಿಲ್ಲ. ಅದನ್ನು ಕೆತ್ತಿದ ಶಿಲ್ಪಿ ಎಂತಹ ಕಲಾನಿಪುಣನು! ಆ ಸುಂದರ ಕಲಾಕೃತಿ ಭಾರತದ ಸುಸಂಸ್ಕೃತಿಯನ್ನು ಹೆಮ್ಮೆಯಿಂದ ಎತ್ತಿ ಹಿಡಿದಿದೆ. ಹಳೆಯಬೀಡು, ಬೇಲೂರು ದೇವಾಲಯ ಗಳನ್ನು ಜಕಣಾಚಾರಿ ಕಟ್ಟಿದನಂತೆ! ಅವುಗಳಮೇಲೆ ಚಿತ್ರಕಲೆ, ನೃತ್ಯದ ಬೊಂಬೆಗಳನ್ನು ಕೆತ್ತಿದ್ದಾನೆ. ನಗ್ನಾವಸ್ಥೆಯ ಸ್ತ್ರೀ ವಿಗ್ರಹಗಳು ಬೇಕಾ ದಷ್ಟಿವೆ. ಇಂಥ ಬೊಂಬೆಗಳನ್ನು ದೇವಾಲಯಗಳ ಮೇಲೆ ನಮ್ಮ ಹಿಂದಿ ನವರು ಏಕೆ ಕೆತ್ತುತ್ತಿದ್ದರೊ ಅರ್ಥವಾಗಲಿಲ್ಲ. ಬಹುಶಃ ಕಟ್ಟಡಕ್ಕೆ ದೃಷ್ಟಿ ತಗಲುತ್ತದೆಂತಲೋ ಅಥವಾ ಅರೆಬೆತ್ತಲೆ ಸ್ತ್ರೀ ಬೊಂಬೆಗಳನ್ನು ನೋಡು ವುದರಲ್ಲಿ ಆಗಿನ ಕಾಲದ ಜನರಿಗೆ ಆಸಕ್ತಿ ಇತ್ತೋ ಏನೊ. ನನ್ನ ಬಂಧು ಗಳು ಕುರುಕ್ಷೇತ್ರದ ಯುದ್ಧವೇ ಕಾಣಲಿಲ್ಲವಲ್ಲ" ಎಂದರು.

"ನೀವು ಯುದ್ಧಭೂಮಿಗೆ ಹೋಗಿದ್ದರೆ ತಾನೆ" ಎಂದೆ. ಗೊಳ್ಳೆಂದು

ಎಲ್ಲರೂ ನಕ್ಕೆವು. ನಾನು ತೋರುಬೆರಳಿನಿಂದ ತೋರಿಸಿದೆ:

"ಅಗೊ! ಆ ಕಡೆ ನೋಡಿ ಕುರುಕ್ಷೇತ್ರ ರಣಭೂಮಿಗೆ ಅರ್ಜುನನನ್ನು ಕೂರಿಸಿಕೊಂಡು ಶ್ರೀಕೃಷ್ಣನು ಸಾರಥಿಯಾಗಿ ಹೋಗುತ್ತಿದ್ದಾನೆ."

ರಂಗಸ್ವಾಮಿ ಸುಮ್ಮನೆ ಇರುವುದುಂಟೆ? "ಅದೇಕೆ ಕೃಷ್ಣ ಹಿಂದಿರುಗಿಕೊಂಡು ಅರ್ಜುನನನ್ನು ನೋಡುತ್ತಾನೆ? ಅರ್ಜುನನು ಕೈಮುಗಿಯುತ್ತಾ ಇದ್ದಾನೆ?" ಎಂದ. ನಮ್ಮ ಬಂಧುಗಳೂ ಆ ವಿಚಾರ ಸ್ವಲ್ಪ ಹೇಳಿ ಎಂದರು.

"ಶ್ರೀಕೃಷ್ಣನು ತಾನೇ ಸಾರಥಿಯಾಗಿ ಅರ್ಜುನನ್ನು ರಥದ ಮೇಲೆ ಕೂಡಿಸಿಕೊಂಡು ಕುರುಕ್ಷೇತ್ರ ರಣಭೂಮಿಗೆ ಹೋಗುತ್ತಿದ್ದಾನೆ. ಅರ್ಜುನನಿಗೆ ಯುದ್ಧ ಮಾಡುವುದಕ್ಕೆ ಏತಕ್ಕೋ ಮನಸ್ಸು ಹಿಂಜರಿಯುತ್ತಿದೆ. ಅದರಲ್ಲೂ ಕರ್ಣನನ್ನು ಕೊಲ್ಲಲು ಅವನ ಮನಸ್ಸು ಅಳುಕುತ್ತದೆ. ಕರ್ಣನ ಹೆಸರು ಎತ್ತಿದರೆ ಅವನ ಹೃದಯ ಒಡೆದು ಚೂರಾದಂತೆ ಭಾಸವಾಗುತ್ತದೆ. ಆಗ ಅರ್ಜುನ ಕೈಮುಗಿದುಕೊಂಡು 'ಸ್ವಾಮಿ, ನಾನು ಯುದ್ಧವನ್ನು ಮಾಡಲಾರೆ. ಕರ್ಣನನ್ನು ಕೊಲ್ಲಲು ನನ್ನ ಮನಸ್ಸು ಏತಕ್ಕೋ ಒಪ್ಪುವುದಿಲ್ಲ. ಅವನು ಯಾವ ಜನ್ಮದಲ್ಲೋ ನನ್ನ ಸಂಬಂಧಿಯಾಗಿರಬೇಕು. ನಮಗೆ ಯುದ್ಧವೂ ಬೇಡ. ರಾಜ್ಯವೂಬೇಡ' ಎಂದು ಶ್ರೀಕೃಷ್ಣನನ್ನು ಬೇಡಿಕೊಳ್ಳುತ್ತಾನೆ. ಅದಕ್ಕೆ ಶ್ರೀಕೃಷ್ಣನು 'ಅರ್ಜುನ, ನಾನು ಎಂಬ ಮಮಕಾರವನ್ನು ಬಿಡು. ಮನುಷ್ಯನು ಕರ್ಮಕ್ಕೆ ಅಧಿಕಾರಿಯೆ ಹೊರತು ಅದರ ಫಲಕ್ಕಲ್ಲ. ಈ ದೇಹ ತೊಟ್ಟುಕೊಳ್ಳುವ ಅಂಗಿಯಂತೆ. ಅದು ಹರಿದು ಹೋದಮೇಲೆ ಮತ್ತೊಂದು ಅಂಗಿಯನ್ನು ತೊಟ್ಟುಕೊಳ್ಳುವಂತೆ—ಆತ್ಮನು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಹೋಗುತ್ತಾನೆ. ಆತ್ಮನಿಗೆ ಸಾವಿಲ್ಲ. ಕರ್ಣನನ್ನು ಕೊಲ್ಲುವುದಕ್ಕೆ ನೀನಾರು? ಆ ಆತ್ಮದ ಗೂಡಾದ ನಶ್ವರ ದೇಹವನ್ನು ಮಾತ್ರ ಬೀಳಿಸಬಹುದೆ ವಿನಾ ಆತ್ಮನನ್ನಲ್ಲ, ನೀನು ಕೊಲ್ಲುವುದು. ಈ ಜಗತ್ತು ಬರಿಯ ಮಾಯೆ. ಯಾರಿಗೂ ಸ್ಥಿರವಾದುದಲ್ಲ. ಸಕಲ ಜಲಚರಗಳೂ ನನ್ನಿಂದ ಸೃಷ್ಟಿಸಲ್ಪಟ್ಟಿವೆ. ಅಣು, ರೇಣು, ತೃಣ, ಕಾಷ್ಠಗಳಲ್ಲಿ ನಾನಿದ್ದೇನೆ. ನನ್ನ ಉಸಿರೆ ಈ ಭೂವ್ಯೋಕಾಶವನ್ನೆಲ್ಲ ತುಂಬಿರುವ ಗಾಳಿ. ಬರಿ ನನ್ನ ಒಂದು ದೃಷ್ಟಿಯಿಂದ ಜಗತ್ತು ಲಯವಾಗುವುದು. ನಾನು ಸ್ವಯಂಭೂತನು. ಸರ್ವ ಸಿದ್ಧಿಯು ನಾನು. ಮುಕ್ತಿಯು ನಾನು. ನಿನ್ನಲ್ಲಿರುವ ಶಕ್ತಿ ನನ್ನ ಚೇತನದ ಒಂದು ಅಣು. ಜನನ ಮರಣಗಳು ಜೀವನದ ಎರಡು ಸ್ವರೂಪಗಳು. ಮೊದಲು

ಕರ್ತವ್ಯಮುಖನಾಗು' ಎಂದು ಬೋಧಿಸುತ್ತಾನೆ" ಎಂದೆ.

"ನೋಡಪ್ಪ ಇಲ್ಲಿ, ಕರ್ಣ ಆ ಮುದುಕಿಗೆ ಏಕೆ ನಮಸ್ಕಾರಮಾಡ್ತಾನೆ" ಎಂದ ರಂಗಸ್ವಾಮಿ.

"ಆ ಮುದುಕಿ, ಕುಂತೀದೇವಿ ಕಣೊ, ಕರ್ಣನ ತಾಯಿ."

"ಕೌರವನ ಕಡೆ ಸೇರಿಕೊಂಡಿದ್ದಾನಲ್ಲಾ. ಬುದ್ಧಿ ಇರಲಿಲ್ಲವೆ ಅವನಿಗೆ!"

"ಬುದ್ಧಿ ಚೆನ್ನಾಗಿತ್ತು. ದೂರ್ವಾಸಮುನಿಗಳಿಂದ ಉಪದೇಶಪೂರ್ವಕವಾಗಿ ಪಡೆದಿದ್ದ ಸೂರ್ಯಮಂತ್ರವನ್ನು ಗಂಗಾನದಿಯ ದಡದಲ್ಲಿ ಕುಂತಿ ಜಪಿಸಲು ಕರ್ಣನು ಹುಟ್ಟಿದನು. ಕರ್ಣನನ್ನು ಪಡೆದಾಗ ಕುಂತೀದೇವಿ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಳು. ಆದ್ದರಿಂದ ಅಪವಾದಕ್ಕೆ ಅಂಜಿ ಆ ಮಗುವನ್ನು ಗಂಗಾನದಿಯಲ್ಲಿ ತೇಲಿಬಿಟ್ಟಳು. ಮಗು ಬೆಸ್ತರವನ ಕೈಗೆ ಸಿಕ್ಕಿ ದುರ್ಯೋಧನನ ಆಶ್ರಯದಲ್ಲಿ ಬೆಳೆಯಿತು. ತಾನು ಪಾಂಡವರಿಗೆ ಹಿರಿಯನೆಂದು ಅವನಿಗೇ ತಿಳಿದಿರಲಿಲ್ಲ. ರಾಜತಂತ್ರನಿಪುಣನಾದ ಶ್ರೀಕೃಷ್ಣನ ಪ್ರೇರಣೆಯಂತೆ, ಯುದ್ಧಕ್ಕೆ ಹೋಗುತ್ತಿರುವಾಗ ಕರ್ಣನನ್ನು ಸಂಧಿಸಿ, ತಾನು ಅವನ ತಾಯಿಯೆಂದೂ ತೊಟ್ಟ ಬಾಣವನ್ನು ತೊಡಬೇಡವೆಂದೂ ಕುಂತೀದೇವಿ ಕರ್ಣನಿಂದ ಭಾಷೆಯನ್ನು ತೆಗೆದುಕೊಳ್ಳುತ್ತಿದ್ದಾಳೆ. ಅಲ್ಲಿ ನೋಡಿ! ಭೀಮನು ಗದೆಯನ್ನು ತಿರುಗಿಸುತ್ತಾ, ತೊಡೆ ತಟ್ಟಿ, ಕೌರವನನ್ನು ಮೂದಲಿಸಿ ಕರೆಯುತ್ತಿದ್ದಾನೆ. ಕೌರವನ ಶಕ್ತಿ ಸಾಮರ್ಥ್ಯ, ಕೆಚ್ಚು, ಹೇಗೆ ಅವನ ಮುಖದ ಮೇಲೆ ಹೊರಹೊಮ್ಮುತ್ತಿದೆ" ಎಂದು ಸ್ವಲ್ಪ ವಿವರಿಸಿದೆ.

ನಾವು ಬಹಳ ಹೊತ್ತಿನವರೆಗೆ ಕಲಾಸೌಂದರ್ಯವನ್ನು ಸವಿದು ಭಾರತದ ಇತಿಹಾಸವನ್ನು ನೆನಪಿಗೆ ತುಂದುಕೊಂಡೆವು. ಅನಂತರ ದೇವಸ್ಥಾನದ ಒಳಗಡೆ ಹೊರಟೆವು. ಕಲ್ಲುಗಳನ್ನು ನುಣ್ಣಗೆ ಕಡೆದು ಕಟ್ಟಿದ್ದ ಭಾರೀ ಕಟ್ಟಡ ಅದು. ಒಳಗಡೆ ವಿಶಾಲವಾದ ಅಂಗಳವಿದೆ. ಇನ್ನೂ ಪೂಜಾರಿಗಳು ಬಂದಿರಲಿಲ್ಲವಾದ್ದರಿಂದ ನಾವು ಅಲ್ಲಿ ಸುತ್ತಲೂ ನೋಡುತ್ತ ಹೋದೆವು. ಗಂಧದ ಮರದಿಂದ ಮಾಡಿದ ಹನ್ನೆರಡು ಅಡಿ ಎತ್ತರ ಏಳೆಂಟು ಅಡಿ ಅಗಲ ಇದ್ದ ಬಾಗಿಲು ಗರ್ಭಾಂಕಣವನ್ನು ಮುಚ್ಚಿತ್ತು. ಬಹಳ ಹೊತ್ತಿನ ಮೇಲೆ ಪೂಜಾರಿಗಳು ಬಂದು, ಬಾಗಿಲು ತೆರೆದು, ಪೂಜೆ ಪ್ರಾರಂಭಿಸಿದರು. ಗರ್ಭಾಂಕಣದ ಒಳಗೆ ಬಹಳ ಕತ್ತಲೆ ಕವಿದಿತ್ತು. ಉರಿಯುತ್ತಿದ ನಾಲ್ಕೈದು ಎಣ್ಣೆ ದೀಪಗಳಿಂದ ಬೆಳಕು ವಿಗ್ರಹದ ಮುಂದೆ ಚೆಲ್ಲಿತ್ತು. ನಾಲ್ಕು ಅಡಿ ಎತ್ತ

ರದ್ದ ಶಿವಲಿಂಗ ಗರ್ಭಗುಡಿಯಲ್ಲಿ ಎದ್ದು ಕಾಣುತ್ತಿತ್ತು. ಸಮುದ್ರಮಥನ ಮಾಡಿದಾಗ ಅಮೃತವನ್ನು ದೇವತೆಗಳಿಗೆ ಬಿಟ್ಟು, ಯಾರೂ ಧರಿಸದಿದ್ದ ವಿಷ ವನ್ನು ಜಗದ ಉದ್ಧಾರಕ್ಕಾಗಿ ಕುಡಿದ ಶಿವನ ಅಡಿದಾವರೆಗಳಲ್ಲಿ ನಮಸ್ಕರಿಸಿ, ಗಂಧ ಪುಷ್ಪಾದಿಗಳಿಂದ ಪೂಜಿಸಿ ಹಿಂದಿರುಗಿದೆವು. ಮೈಲಾಪುರದ ದೇವಾಲ ಯದ ಸುಂದರ ಕಲಾಕೃತಿಯ ನೆನಪು ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿದೆ.

ದೇವಸ್ಥಾನದಲ್ಲಿ ನೋಡಿದ ಕಲೆಯ ವಿಷಯವಾಗಿ ನಮ್ಮ ನಮ್ಮಲ್ಲೇ ಮಾತನಾಡುತ್ತ ಕೇಂದ್ರ ರೈಲ್ವೆ ನಿಲ್ದಾಣದ ಮುಂದೆ ಹಾದು ಬರುತ್ತಿದ್ದೆವು. ರಸ್ತೆಯ ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಬೇಕಾಗಿತ್ತು. ನಾವೆಲ್ಲರೂ ಹಿಂದೆ ಮುಂದೆ ನೋಡಿಕೊಂಡು ಬಹು ಎಚ್ಚರಿಕೆಯಿಂದಲೆ ದಾಟುತ್ತಿದ್ದೆವು. ಹಾಗೆ ದಾಟುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ವಿದ್ಯುಚ್ಛ ಕ್ತಿಯ ಗಾಡಿ (Electric train) ಬಂದೇಬಿಟ್ಟಿತು. ರಂಗಸ್ವಾಮಿ ಎಲ್ಲೋ ನೋಡುತ್ತಿದ್ದವನು ಸರ್ರನೆ ಮತ್ತೊಂದು ಕಡೆಗೆ ಸೇರಬೇಕೆಂಬ ಅವಸರದಲ್ಲಿ ಅದರ ಮುಂದಕ್ಕೆ ನೆಗೆದನು. ನಾನು, ಅಯ್ಯೋ ಎಂದು ಹುಡು ಗನನ್ನು ಮಿಂಚಿನ ವೇಗದಲ್ಲಿ ಹಿಂದಕ್ಕೆ ಎಳೆದು ಬಿಟ್ಟೆ; ಒಂದೇ ಒಂದು ಗೇಣು ದೂರ ಹುಡಗನಿಗೂ ಆ ಗಾಡಿಗೂ. ಕ್ಷಣಾರ್ಧದಲ್ಲಿ ಹುಡುಗನ ಕೈಕಾಲುಗಳು 'ಟ್ರಾಂ'ನ ಚಕ್ರಕ್ಕೆ ಸಿಕ್ಕಿ ಜಜ್ಜಿಹೋಗುತ್ತಿದ್ದುವು. ನನ್ನ ರಕ್ತನಾಡಿ ನಿಂತುಹೋದಂತಾಯಿತು. ಹುಡುಗನ ತಾಯಿ ಬೊಂಬೆಯಂತೆ ನಿಂತುಕೊಂಡಳು. ನಮ್ಮ ಬಂಧುಗಳಿಬ್ಬರೂ ಬೆವರಿ ಬೆಪ್ಪಾಗಿ ನಿಂತರು. ಕ್ಷಣಕಾಲ ಎಲ್ಲರೂ ಮೌನವಾಗಿ ಮೃತ್ಯುವಿನ ಬಾಯಿಂದ ಪಾರಾದ ಹುಡು ಗನ ಮುಖವನ್ನೇ ದಿಟ್ಟಿಸಿನೋಡುತ್ತಾ ನಿಂತೆವು. ಅನಂತರ ಉಸಿರನ್ನು ಸಮಾಧಾನಕ್ಕೆ ತಂದುಕೊಂಡೆ. "ಅಯ್ಯೊ ದೇವರೆ! ಎಂಥ ಅಪಘಾತ ವಾಗಿತ್ತು. ಒಂದು ಕ್ಷಣದಲ್ಲಿ ಕೆಲಸ ಮಿಂಚಿಹೋಗಿತ್ತಲ್ಲಾ!" ಎಂದು ನಿಟ್ಟುಸಿರು ಬಿಟ್ಟೆವು. ಮೂರ್ ಮಾರ್ಕೆಟ್ಟಿನ ಮುಂದೆ ಒಂದು ಮರದ ನೆಳ ಲಲ್ಲಿ ಸ್ವಲ್ಪ ಹೊತ್ತು ಕುಳಿತುಕೊಂಡು ಹೆದರಿದ್ದ ನಮ್ಮ ದೇಹಗಳನ್ನು ತಂಗಾಳಿಗೊಡ್ಡಿ ಸುಧಾರಿಸಿಕೊಂಡೆವು. ಎಳನೀರನ್ನು ತರಿಸಿ ಎಲ್ಲರೂ ಕುಡಿ ದೆವು. ಅನಂತರ ನೆಟ್ಟಗೆ ಮನೆಗೆ ಹೋದೆವು. ಮನೆಗೆ ಹೋದ ಕೂಡಲೆ ಲಕ್ಷ್ಮಿ "ರಂಗಸ್ವಾಮಿ ಇನ್ನೇನು 'ಟ್ರಾಂ' ಗಾಡಿಗೆ ಸಿಕ್ಕಿಹೋಗಿದ್ದ"ನೆಂದು ಹೇಳಿದಳು. ವಿಷಯವನ್ನು ಕೇಳಿ ಹೆಂಗಸರು ಗಾಬರಿಗೊಂಡರು. ಮಾಡು ತ್ತಿದ್ದ ಅಡಿಗೆಯನ್ನೂ ಗಮನಿಸದೆ "ಹೇಗೆ? ಎತ್ತ? ಎಲ್ಲಿ?" ಎಂದು ಕುತೂ

ಹಲದಿಂದ ಕೇಳುತ್ತಿದ್ದರು.

ಊಟವಾದ ನಂತರ ನಾವು ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಸಾಯಂಕಾಲ ಐದು ಘಂಟೆ ಸುಮಾರಿಗೆ ಸಮುದ್ರದ ಕಡೆ ಹೊರಟೆವು. ನೇರವಾಗಿ ಮೆರಿನಾಬೀಚ್‌ಗೆ ಹೋಗಿ ಮರಳು ದಿಬ್ಬದ ಮೇಲೆ ಕುಳಿತೆವು. ಮೇಲಿನ ಅನಂತವಾದ ನೀಲಾಕಾಶ ಅಪಾರವಾದ ಜಲವಾರಿಧಿಯನ್ನು ಎಲ್ಲಿಯೋ ಬಹುದೂರದಲ್ಲಿ ಆಲಂಗಿಸಿದಂತಿತ್ತು. ಒಂದೊಂದು ಸಾರಿ ಮತ್ತೊಂದು ಆಕಾಶವೇನಾದರೂ ಹಾಸಿ ಬಿದ್ದಿವೆಯೋ ಎಂಬ ವಿಸ್ಮಯವನ್ನು ತರುತ್ತಿತ್ತು. ಸಾಯಂಕಾಲದ ಸೂರ್ಯನ ಕಿರಣಗಳು ಸಾವಿರಾರು ಹಾವಿನ ಹೆಡೆಗಳಂತೆ ಬರುತ್ತಿದ್ದ ಮಾಲೆ ಅಲೆಗಳ ಮೇಲೆ ಬಿದ್ದು ಥಳಥಳಿಸುತ್ತಿತ್ತು. ಸಮುದ್ರದ ವೈಶಾಲ್ಯವನ್ನು, ವೈಶಿಷ್ಟ್ಯವನ್ನು ನೋಡುತ್ತಾ ಕುಳಿತೆವು. ರಂಗಸ್ವಾಮಿ ತಡಿಯಲ್ಲಿ ಮೆಲ್ಲನೆ ನಮ್ಮ ಧೈರ್ಯದ ಮೇಲೆ ಹೋಗುತ್ತಿದ್ದ. ಅಲೆ ಬಂದಾಗಂತು ಬೀಳುವುದನ್ನೂ ಕಾಣವೆ ದವಡಾಯಿಸಿ ಬರುತ್ತಿದ್ದ. ಅನೇಕ ಜನರು ವಿಹಾರಕ್ಕಾಗಿ ಬಂದರು. ಕೆಲವರು ಉತ್ತರ ದೇಶದ ಕಡೆಯವರು. ಹೆಂಗಸರು ಷರಾಯನ್ನೂ ಮೇಲೆ ಒಂದು ಷರಟನ್ನೂ ಹಾಕಿಕೊಂಡು ಎದೆಯಮೇಲೆ ಚೌಕವನ್ನು ಹಾಕಿಕೊಂಡಿದ್ದರು. ಮತ್ತೆ ಕೆಲವು ಪ್ರಾಯದ ಹುಡುಗಿಯರು ಗಂಡಸರು ಹಾಕಿಕೊಳ್ಳುವಂತೆ ಷರಾಯನ್ನು ಅಂಗಿಯ ಮೇಲೆ ಹಾಕಿಕೊಂಡಿದ್ದರು. ಎಡಗೈಗೆ ಒಂದೊಂದು ಗಡಿಯಾರ ಕಟ್ಟಿದ್ದರು. ಕತ್ತಿಗೆ ಬೇರೆ ರಂಗು ರಂಗಿನ ಸಣ್ಣ ಚೌಕವನ್ನು ಕಟ್ಟಿದ್ದರು. ತಲೆಕೂದಲು ಉದ್ದವಾಗಿದ್ದರೆ ಚೆನ್ನಾಗಿಲ್ಲವೆಂದು ಹೆಗಲವರೆಗೆ ಮಾತ್ರ ಬಿಟ್ಟು ಉಳಿದುದನ್ನು ಕತ್ತರಿಸಿಬಿಟ್ಟಿದ್ದರು. ಅವರ ಉಡುಪು ನನಗೆ ನಾಚಿಕೆಯನ್ನು ತರುತ್ತಿತ್ತು. ಹುಡುಗಿಯರೇನೊ ತೆಳ್ಳಗೆ ಬೆಳ್ಳಗಿದ್ದರು. ಆದರೆ ಕ್ಷಯರೋಗ ಪೀಡಿತರಂತಿದ್ದರು. ತುಟಿಗಳಿಗೆ ಹಚ್ಚಿದ್ದ ರಂಗು ರಕ್ತದ ಬಟ್ಟಲಿಗೆ ಬಾಯಿ ಹಾಕಿದ್ದ ಹಾಗೆ ಕಾಣುತ್ತಿತ್ತು. ಅವರ ಉಗುರುಗಳೆಲ್ಲ ಸನ್ಯಾಸಿಯ ಉಗುರುಗಳಿಗಿಂತೇನೂ ಕಡಿಮೆ ಇರಲಿಲ್ಲ—ಉದ್ದದಲ್ಲಿ. ಉಗುರುಗಳಿಗೆ ಬೇರೆ ಕೆಂಪು ರಂಗನ್ನು ಹಚ್ಚಿಕೊಂಡಿದ್ದರು. ಅಂತೂ ಪಾಶ್ಚಾತ್ಯರ ಸಂಸ್ಕೃತಿ ಅವರ ಮನಸ್ಸಿನ ಮೇಲೆ ಮುದ್ರೆ ಒತ್ತಿದಂತೆ ಕಾಣುತ್ತಿತ್ತು. ಅನೇಕ ಹುಡುಗರು ಅಲೆಯ ಸಂಗಡ ಕೊಚ್ಚಿ ಬರುವ ಸಣ್ಣ ಸಣ್ಣ ಮೀನು, ಸಿವಡಿಯನ್ನು ಹುಡುಕಿ ಹಿಡಿಯುತ್ತಿದ್ದರು. ನಾಲ್ಕೈದು ದೋಣಿಗಳು ಸುಮಾರು ಅರ್ಧ ಮೈಲಿ ದೂರದಲ್ಲಿ ನೀರಿನ ಮೇಲೆ ತೇಲು

ತ್ತಿದ್ದುವು. ಅವು ಬಹುದೂರ ಕಣ್ಣಿಗೆ ಕಾಣಿಸದ ವರೆಗೆ ತೇಲುತ್ತಾ ಹೊರಟುಹೋದುವು. ಬೆಸ್ತರು ಮೀನು ಹಿಡಿಯಲು ಹಾಗೆ ದೋಣಿಗಳ ಮೇಲೆ ಬಹುದೂರ ಹೋಗಿ, ರಾತ್ರೆ ಒಂಬತ್ತು ಘಂಟೆಗೆ ಸಮುದ್ರದಿಂದ ಈಚೆಗೆ ಬರುತ್ತಾರೆ. ನಾವು ನೋಡುತ್ತಿದ್ದ ಹಾಗೆಯೆ ಒಂದು ಸಣ್ಣ ದೋಣಿಯನ್ನು ಒಬ್ಬನು ಹುಟ್ಟು ಹಾಕುತ್ತ ಅಲೆಯ ಸಂಗಡ, ತೇಲುತ್ತ, ಏಳುತ್ತ, ಬೀಳುತ್ತ ಬರುತ್ತಿದ್ದ. ಒಂದು ಸಾರಿ ಒಂದು ಭಾರಿ ಅಲೆಯು ಆ ದೋಣಿಯನ್ನು ಮೇಲಕ್ಕೆ ಅನಾಮತ್ತು ಎಸೆದು ಗಿರ್ರನೆ ಸುತ್ತಿಸಿ ಬಿಟ್ಟಿತು. ದಡದಲ್ಲಿ ಆ ಮನುಷ್ಯ ಅದನ್ನು ಬಿಡದೆ ಅದರ ಸುತ್ತ ತಾನೂ ಗಿರ್ರನೆ ಸುತ್ತಿದ. ನೋಡುತ್ತ ನಿಂತಿದ್ದನನಗೇ ಭಯವಾಗುತ್ತಿತ್ತು, ಅವನು ಎಲ್ಲಿ ಮುಳುಗಿಹೋಗುತ್ತಾನೊ ಎಂದು. ಅವನ ಸಾಹಸಕಾರ್ಯವನ್ನು ನೋಡಿ ನಮ್ಮೆಲ್ಲರಿಗೂ ಆಶ್ಚರ್ಯವಾಯಿತು. ಒಂದೇ ಒಂದು ಕ್ಷಣದಲ್ಲಿ ಅಲೆಯ ಜೊತೆಯಲ್ಲಿ ದೋಣಿಯನ್ನು ಬಹುಸೂಕ್ಷ್ಮವಾಗಿ ತೇಲಿಸಿಕೊಂಡು ದಡಕ್ಕೆ ಬಂದ. ಆ ವಿಶಾಲ ನೀಲಸಮುದ್ರ ಪ್ರಕೃತಿಯ ಒಂದು ಭಯಂಕರ ದೃಶ್ಯ ದಂತೆ ಕಂಡಿತು. ಸಮುದ್ರದ ಎಲ್ಲೆಯಿಲ್ಲದ ಎಲ್ಲೆಯನ್ನೂ ಶಾಂತಿಯನ್ನೂ ಎಷ್ಟು ಎಷ್ಟು ಹೆಚ್ಚಾಗಿ ನೋಡುತ್ತಿದ್ದೆವೊ ಅಷ್ಟು ಅಷ್ಟು ತೃಪ್ತಿ ಪಡುತ್ತಿ ದ್ದೆವು. ನಾವು ಮೈಸೂರು ದೇಶದಲ್ಲಿ ನೋಡಿದ್ದುದು ಕೃಷ್ಣರಾಜಸಾಗರ. ಅದು ತುಂಬಿ ತುಳುಕುತ್ತಿರುವಾಗ ಅದರ ವೈಶಿಷ್ಟ್ಯವನ್ನು ನೋಡಲು ಅನೇಕ ಸಾರಿ ನಾವು ಹೋಗಿದ್ದೆವು. ಆ ಜಲಾಶಯವನ್ನೇ ವರ್ಷ ವರ್ಷ ನೋಡಲು ಕಾತರರಾಗಿದ್ದ ನಾವು ಸಮುದ್ರವನ್ನು ದಿಟ್ಟಿಸಿನೋಡುತ್ತ ಕುಳಿ ತಿದ್ದುದರಲ್ಲಿ ಆಶ್ಚರ್ಯವೇನಿರಲಿಲ್ಲ. ಕತ್ತಲಾಗುವವರೆಗೂ ನೋಡುತ್ತ ಕುಳಿತೇ ಬಿಟ್ಟೆವು. ಆ ದಿನ ಒಂದು ಹಡಗು ಬಂದು ಮೆರಿನಾ ಬೀಚಿಗೆ ಅರ್ಧ ಮೈಲಿ ದೂರದಲ್ಲಿದ್ದ ಬಂದರಿನಲ್ಲಿ ನಿಂತಿದ್ದಿತು. ನಮ್ಮ ರಂಗಸ್ವಾಮಿ ಕೂಗಿಕೊಂಡ :

"ಅಲ್ಲಿ ನೋಡಿ! ದೊಡ್ಡ ಬಂಗಲೆಯನ್ನು ಸಮುದ್ರದ ಮಧ್ಯದಲ್ಲಿ ಕಟ್ಟಿದ್ದಾರೆ" ಎಂದು. ಇದೇನು ಈ ಹುಡುಗನ ಮಾತು ಎಂದು ಎಡ ಭಾಗಕ್ಕೆ ತಿರುಗಿ ನೋಡಿದೆವು. ನಿಜವಾಗಿಯೂ ಯಾವುದೊ ಕಾರ್ಖಾನೆ ಯನ್ನು ಸಮುದ್ರದಲ್ಲಿ ಕಟ್ಟಿರುವಂತೆ ಕಾಣುತ್ತಿತ್ತು. ಅದರ ಮೇಲೆ ದೊಡ್ಡ ತೆಂಗಿನ ಮರದಂತೆ ಕಾಣುತ್ತಿದ್ದ ಭಾರಿ ಚಿಮಿನಿಯಿಂದ ಹೊಗೆ ಜೇರೆ ಹೊರಡುತ್ತಿತ್ತು. ಒಂದೆರಡು ಫರ್ಲಾಂಗು ದೂರ ಹೋಗಿ

ನೋಡಿದೆವು, ಆ ಹಡಗನ್ನು. ಅಷ್ಟರಲ್ಲಿ ಕತ್ತಲೆಯ ಮುಸುಕು ಬಹು ದೂರದ ಸಮುದ್ರದ ಅಂಚಿನಿಂದ ಮೆಲ್ಲಮೆಲ್ಲನೆ ಸಾಗರವನ್ನು ಮರೆಸುತ್ತಾ ಬಂದಿತು. ಅಲೆಗಳ ಸದ್ದು ಮಾತ್ರ ಎಡಬಿಡದೆ ಮೊರೆಯುತ್ತಲೇ ಇತ್ತು. ಮೆರಿನಾ ಬೀಚಿನಿಂದ ಹೊರಟೆವು. ಸುಮಾರು ಎರಡು ಫರ್ಲಾಂಗು ದೂರದ ವರೆಗೆ ಮರಳು ರಾಶಿ ರಾಶಿ ಬಿದ್ದಿದ್ದಿತು. ಸಮುದ್ರದ ಅಂಚಿನಲ್ಲಿಯೆ ಮದ್ರಾಸು ಪ್ರಾಂತ್ಯದ ಗೌರ್ನರವರು ವಾಸಮಾಡುವ ಭವನವಿದೆ. ಅದು ಬಹು ವಿಶಾಲವಾಗಿಯೂ ಸುಂದರವಾಗಿಯೂ ಇದೆ. ನಮ್ಮ ಸಂಗಡ ಬರುತ್ತಿದ್ದ ಒಬ್ಬರನ್ನು ವಿಚಾರಿಸಿದೆ:

"ಇಲ್ಲಿಯವರೆಗೆ ಮರಳು ತುಂಬಿದೆಯಲ್ಲ, ಕಾರಣವೇನು" ಎಂದು. "ಯಾವಾಗಲೊ ಒಂದು ಸಾರಿ ಸಮುದ್ರ ಉಕ್ಕಿ ಮುಂಡಿಯುದ್ದ ನೀರು ಪಟ್ಟಣದ ಬೀದಿಗಳಲ್ಲಿ ತುಂಬಿತ್ತಂತೆ. ಆಗ ಎಷ್ಟೋ ಮನೆಗಳು ಉರುಳಿ ಹೋದುವಂತೆ. ಆಗ ಅಲೆಗಳು ತಂದು ತುಂಬಿದ ಮರಳು ಇದು" ಎಂದರು. ಆ ದೃಶ್ಯವನ್ನು ನಾನು ಮನಸ್ಸಿನಲ್ಲೆ ಚಿತ್ರಿಸಿಕೊಂಡು ಬೆದರಿಹೋದೆ. ಏನು ಮಾಡುವುದು? ಪ್ರಕೃತಿ ಕೋಪಿಸಿಕೊಂಡರೆ ಅದನ್ನು ತಡೆಯುವ ಸಾಧನವು ಯಾವುದಿದೆ? ನೀರು ಗಾಳಿಗಳ ಶಕ್ತಿಯ ಮುಂದೆ ಯಾವ ಶಕ್ತಿ ಎದುರಾಗುತ್ತದೆ? ವಿಜ್ಞಾನಿಗಳು ಅವುಗಳ ಶಕ್ತಿಯನ್ನೆ ಹಿಡಿದು ಯಂತ್ರಗಳ ಮೇಲೆ ಉಪಯೋಗಿಸಿ ನಿತ್ಯ ಜೀವನವನ್ನು ಮನುಷ್ಯನ ಅನುಕೂಲಕ್ಕೆ ತಕ್ಕಂತೆ ಸುಲಭ ಮಾಡಿಕೊಂಡಿದ್ದಾರೆ. ನಾವು ಹೋಗುವ ರಸ್ತೆಯಲ್ಲಿ ಬಾಗಿಲು ಹಾಕಿದ್ದಿತು. ರೈಲುಗಾಡಿ ಬರುತ್ತಿರಬೇಕೆಂದು ತಿಳಿದು ನಾವು ಮೂರು ನಾಲ್ಕು ನಿಮಿಷ ಅಲ್ಲಿ ನಿಂತೆವು. ಕಣ್ಣು ಮುಚ್ಚಿ ಬಿಡುವಷ್ಟರಲ್ಲಿ 'ಭರ್ರ್ರೋ' ಎಂದು ಒಂದು ರೈಲುಗಾಡಿ ಹೊರಟುಹೋಯಿತು. ಅದರ ಮೇಲ್ಭಾಗದಲ್ಲಿದ್ದ ಅನೇಕ ಕೊಂಡಿಗಳು ಹಾಸಿದ್ದ ರೈಲ್ವೆ ಕಂಬಿಗಳ ಮೇಲೆ ಹತ್ತು ಅಡಿಗಳ ಎತ್ತರದಲ್ಲಿ ಉದ್ದಕ್ಕೂ ಹಾಕಿದ್ದ ವಿದ್ಯುಚ್ಛಕ್ತಿ ತಂತಿಗಳಿಗೆ ತಗಲುತ್ತಿದ್ದುವು. ಇದು 'ಎಲೆಕ್ಟ್ರಿಕ್ ರೈಲು' ಎಂದು ನಮಗೆ ತಿಳಿಯಿತು. ಜನರು ದೂರದ ಬಡಾವಣೆಗೂ ಮತ್ತು ಕಾರ್ಖಾನೆಗಳಿಗೂ ಜಾಗ್ರತೆಯಾಗಿ ಹೋಗಿ ಬರಲು ಇಂಥ ರೈಲುಗಳನ್ನು ಇಟ್ಟಿದ್ದಾರೆ. ಸುಮಾರು ಅರ್ಧ ಘಂಟೆಗಳಿಗೊಂದು ಸಾರಿ ಈ ರೈಲುಗಳು ಹೋಗುತ್ತಲೂ ಬರುತ್ತಲೂ ಇರುತ್ತವೆ. ಎಷ್ಟಾದರೂ ಯಂತ್ರಯುಗ ಇದು! ವಿದ್ಯುಚ್ಛಕ್ತಿಯ ದೀಪಗಳು ರಸ್ತೆಗಳ ಎರಡು ಪಕ್ಕಗಳಲ್ಲಿಯೂ ಸಾಲುಸಾಲಾಗಿ ಉರಿಯುತ್ತಿದ್ದುವು. .ಇಡಿ

ಪಟ್ಟಣವೆಲ್ಲ ವಿದ್ಯುಚ್ಛಕ್ತಿಯ ದೀಪಗಳಿಂದ ಬೆಳಗುತ್ತಿತ್ತು. ಪ್ರತಿಯೊಂದು ರಸ್ತೆಯಲ್ಲಿಯೂ ಜನಸಂದಣಿ ಪಿತಿಗುಟ್ಟುತ್ತಿತ್ತು. ಯಂತ್ರದಂತೆ ಚಲಿಸುತ್ತಿದ್ದ ಜನರ ಗುಂಪಿನ ಮಧ್ಯೆ ನುಗ್ಗಿ ನುಸಿದು ಬಹು ಎಚ್ಚರಿಕೆ ಯಿಂದ ಬರುತ್ತಿದ್ದೆವು. ಒಬ್ಬ ಹೆಂಗಸು ಹಣ್ಣು ಹಂಪಲು ತುಂಬಿದ್ದ ಬುಟ್ಟಿ ಯೊಂದನ್ನು ತಲೆಯ ಮೇಲೆ ಹೊತ್ತುಕೊಂಡು ನಮ್ಮ ಸಂಗಡ ಬರುತ್ತಿದ್ದಳು. ಹಾಗೆಯೆ 'ಮೌಂಟ್ ರೋಡಿ'ನ ವರೆಗೆ ಬಂದಳು. ಆ ರಸ್ತೆಯಲ್ಲಿ ಅಂಗಡಿಗಳು ವಿಶೇಷವಾಗಿವೆ. ಕೊಂಡುಕೊಳ್ಳುವವರ ಸಂಖ್ಯೆಯಂತೂ ಹೇಳತೀರದು. ಆಕೆ ನುಗ್ಗಿ ಬರುತ್ತಿದ್ದಾಗ ತಲೆಯ ಮೇಲಿದ್ದ ಕುಕ್ಕೆ ಜನರ ನೂಕಾಟದಿಂದ ಬಿದ್ದುಹೋಯಿತು. ಆಕೆ ಕೆಳಗೆ ಬಗ್ಗಿ ಅದನ್ನು ಎತ್ತಿಕೊಳ್ಳಲು ಅವಕಾಶವಾಗಲಿಲ್ಲ. ಒಂದು ಕ್ಷಣದಲ್ಲೆ ಆ ಕುಕ್ಕೆ ಜಜ್ಜಿಹೋಗಿ ಅದರಲ್ಲಿದ್ದ ಹಣ್ಣುಗಳೆಲ್ಲ ಕಲಸುಮೇಲೋಗರವಾಯಿತು. ಆಕೆ ಅದನ್ನು ನೋಡಿ "ಇನ್ನೇನು ಗತಿ" ಎಂದು ಎದೆ ಬಡಿದುಕೊಂಡಳು. ಲಕ್ಷ್ಮಿ "ಹೋದರೆ ಹೋಗಲಿ, ವ್ಯಸನಪಡಬೇಡಮ್ಮ" ಎಂದು ಸಮಾಧಾನ ಮಾಡಿದಳು. ಬಡವೆಯಂತೆ ಕಾಣುತ್ತಿದ್ದ ಅವಳು ಬಹು ಚಿಂತೆ ಪಡುತ್ತಿದ್ದಳು ಸಾಮಾನು ಹೋದುದಕ್ಕೆ.

ರಂಗಸ್ವಾಮಿಯ ಕೈಯನ್ನು ಸಿಂಗ್ರಪ್ಪನವರು ಹಿಡಿದುಕೊಂಡೇ ಬಂದರು. ಬಹು ಎಚ್ಚರಿಕೆಯಿಂದ ನಾವು ಸುಮಾರು ಎಂಟೂವರೆ ಘಂಟೆಗೆ ಮನೆ ಸೇರಿದೆವು. ಆ ದಿನ ಹಬ್ಬವಿಲ್ಲದಿದ್ದರೂ ನಮ್ಮ ಬಂಧುಗಳ ಮನೆಯಲ್ಲಿ ನಮಗಾಗಿ ಒಬ್ಬಟ್ಟು ಕೀರಿನ ಊಟ ಸಿದ್ಧವಾಗಿತ್ತು. ಎಲ್ಲರೂ ಊಟ ಮುಗಿಸಿ ತಾಂಬೂಲವನ್ನು ಹಾಕಿಕೊಂಡೆವು. ಅಷ್ಟರಲ್ಲಿ ಹನ್ನೊಂದು ಘಂಟೆ ಯಾಯಿತು. ಜನರ ಓಡಾಟ ಕೊಂಚ ಕಡಮೆಯಾಗಿ ನಿಶ್ಶಬ್ದತೆ ಹೆಚ್ಚುತ್ತ ಬಂತು. ನಾವು ಮಲಗಿಕೊಳ್ಳಲು ಪಕ್ಕದಲ್ಲಿದ್ದ ಒಂದು ಕೊಠಡಿಗೆ ಹೋದೆವು. ಗವಿಗೆ ಕೂಡಿದ ಹಾಗಾಯಿತು. ಡಾಮರು ಬಳಿದಿರುವ ರಸ್ತೆಗಳ ಮೇಲೆ ಬೀಸಿ ಬರುವ ಬಿಸಿ ಗಾಳಿ, ಒಂದಕ್ಕೊಂದು ಹೆಣೆದುಕೊಂಡು, ಬೀಸುವ ಗಾಳಿಗೆ ಅಡ್ಡಗೋಡೆ ಹಾಕಿದಂತಿದ್ದ ಮನೆಗಳು, ಇವುಗಳಿಂದ ಮತ್ತಷ್ಟು ಸೆಕೆ ಹೆಚ್ಚಿತು. ಮೈ ಉರಿಯತ್ತಿತ್ತು. "ಏನು ಮಾಡುವುದು—ಈ ಪಟ್ಟಣದ ಹವಾ ಹೀಗೆ" ಎಂದು ತೆಪ್ಪಗಾದೆವು. ಮನುಷ್ಯ ಪ್ರತಿದಿನ ಕಷ್ಟ ಅನುಭವಿಸುತ್ತಿದ್ದರೆ ಆದಕ್ಕೆ ಹೊಂದಿಕೊಳ್ಳುತ್ತಾನೆ. ಹಾಗೆ ಹೊಂದಿಕೊಂಡ ಮನುಷ್ಯ ಕಷ್ಟದಲ್ಲಿ ಸುಖದ ಸವಿಯನ್ನು ಅನುಭವಿಸುತ್ತಾನೆ. ಮಧ್ಯ

ರಾತ್ರಿಯವರೆಗೆ ನನಗೆ ನಿದ್ದೆ ಹತ್ತಲೇ ಇಲ್ಲ. ರಂಗಸ್ವಾಮಿಯೂ ಅವನ ತಾಯಿಯೂ ಸೆಕೆ ತಡೆಯಲಾರದೆ ಒದ್ದಾಡುತ್ತಿದ್ದರು. ಆ ರಾತ್ರಿ ಮಳೆ ಬರುವ ಸೂಚನೆ ಇತ್ತು. ಗುಡುಗು ಮಿಂಚುಗಳಿಲ್ಲದೆ ಮಳೆ ಇಪ್ಪತ್ತು ನಿಮಿಷಗಳವರೆಗೆ ಬಿದ್ದಿತು. ಮಳೆ ಬಿದ್ದ ಮೇಲೆ ಬೀಸುತ್ತಿದ್ದ ತಂಗಾಳಿ ಯಿಂದ ನನಗೆ ನಿದ್ದೆಯ ಜೊಂಪು ಹತ್ತಿತು. ನನಗೆ ಎಚ್ಚರವಾದಾಗ ಇನ್ನೂ ಬೆಳಗಾಗಿರಲಿಲ್ಲ. ಅಷ್ಟರಲ್ಲೇ ಪ್ರಾರಂಭವಾಗಿತ್ತು—ಪಟ್ಟಣದ ಜನರ ನಿತ್ಯ ಜೀವನದ ಗಜಿಬಿಜಿ.

ಬೆಳಗ್ಗೆ ಸ್ನಾನಮಾಡಿ ಬಟ್ಟೆ ಬದಲಾಯಿಸಿಕೊಂಡೆವು. ಉಪಾಹಾರ ವಾದನಂತರ ಎಂಟು ಘಂಟೆಗೆ ಸರಿಯಾಗಿ ಪ್ರಾಣಿ ಸಂಗ್ರಹಶಾಲೆ (Zoo) ಯನ್ನು ನೋಡಲು ಹೊರಟೆವು. ಹಿಂದಿನ ರಾತ್ರಿ ಮಳೆ ಬಿದ್ದಿದ್ದುದರಿಂದ ಕೆಲವು ಬೀದಿಗಳಲ್ಲಿ ಕೆಸರು ಎರಚಾಡುತ್ತಿತ್ತು. ಅಂತಹ ದೊಡ್ಡ ಪಟ್ಟಣ ಗಳಲ್ಲಿನ ಗಲೀಜನ್ನು ಗುಡಿಸಿ ಸಾಗಿಸಬೇಕಾದರೆ ಸ್ವಲ್ಪ ಹೊತ್ತಾಗುತ್ತ ದೆಯೆ! ಅಷ್ಟರಲ್ಲಿ ಮುನಿಸಿಪಾಲಿಟಿಯ ಸೇವಕರು ಬೈಸಿಕಲ್ಲುಗಳ ಮೇಲೆ ಬಂದು ಪೊರಕೆ ಹಿಡಿದು ಗುಡಿಸುತ್ತಿದ್ದ ಬಡಸಾಯಿಗಳ ಮೇಲೆ ಉಸ್ತುವಾರಿ ನಡೆಸುತ್ತಿದ್ದರು. ಕೆಸರು ಎರಚಾಡುತ್ತಿದ್ದ ಬೀದಿಗಳಲ್ಲಿಯೆ ಅರೆ ಬೆತ್ತಲೆಯ ಜನರು ಒಗೆದ ಉಡುಪನ್ನು ಧರಿಸಿದ್ದ ಹೆಂಗಸರನ್ನೂ ಕೋಚ್ ಗಾಡಿಯ ಮೇಲೆ ಕೂಡಿಸಿಕೊಂಡು, ಗಾಡಿಯ ನೊಗವನ್ನು ಹಿಡಿದು ಬಹು ಕಷ್ಟ ದಿಂದ ಎಳೆದುಕೊಂಡು ಕುಕ್ಕೋಟದಲ್ಲಿ ಓಡುತ್ತಿದ್ದರು.

ಒಂಬತ್ತು ಘಂಟೆಗೆ ಸರಿಯಾಗಿ ಪ್ರಾಣಿಸಂಗ್ರಹಶಾಲೆಯನ್ನು ತಲಪಿ ದೆವು. ಒಬ್ಬೊಬ್ಬರಿಗೆ ನಾಲ್ಕು ಆಣೆ ಕೊಟ್ಟು ಒಳಗೆ ಪ್ರವೇಶಮಾಡಿದೆವು. ವಿಶಾಲವಾದ ಮತ್ತು ಎತ್ತರವಾದ ಪೌಳಿ ಗೋಡೆ, ಅಲ್ಲಲ್ಲಿ ಕೃತಕ ಕೊಳ ಗಳು ಮತ್ತು ನೀರಿನ ಬುಗ್ಗೆಗಳು ಇದ್ದುವು. ಸುಮಾರು ಇಪ್ಪತ್ತೈದು ಜನರು ನಮಗಿಂತ ಮೊದಲೆ ನೋಡಲು ಬಂದಿದ್ದರು. ಹುಲಿ, ಕರಡಿ ಮತ್ತು ಮೂರು ಸಿಂಹಗಳಿದ್ದುವು. ನಮ್ಮ ಕಡೆಯ ಸಣ್ಣ ಹಸುರುಗಿಳಿ ಯಿಂದ ಹಿಡಿದು ಕೋಳಿ ಗಾತ್ರದ ಗಿಳಿಗಳಿದ್ದುವು. ಕೆಲವು ಗಿಳಿಗಳು ಆಕಾಶನೀಲಿ, ಕಡುಗೆಂಪು, ಅಚ್ಚಹಳದಿ ಬಣ್ಣಗಳನ್ನು ಹೊಂದಿದ್ದುವು; ಕೆಲವು ನವಿಲಿನ ಬಣ್ಣಗಳಿಂದ ಕೂಡಿದ್ದುವು. ಅಂತಹ ದಪ್ಪ ದಪ್ಪ ನಾಲ್ಕೈದು ಗಿಳಿಗಳನ್ನು ಬಿಕಾನೇರ್ ಮಹಾರಾಜರು ಅಲ್ಲಿಗೆ ಬಹುಮಾನ ವಾಗಿ ಕಳುಹಿಸಿದ್ದರು. ಹುಲಿ ಚಿರತೆಯ ಸಣ್ಣ ಸಣ್ಣ ಮರಿಗಳು ನಾಲ್ಕು

ಇದ್ದುವು. ದೇಶದ ನಾನಾಕಡೆಯಿಂದ ಬೇಟೆಗಾರರು ಅವುಗಳನ್ನು ಕಳುಹಿಸಿ ಕೊಟ್ಟಿದ್ದರು. ಅವು ನೋಡಲು ಬಹು ಮುದ್ದಾಗಿದ್ದುವು. ಮೈಮೇಲೆ ದೊಡ್ಡ ದೊಡ್ಡ ಮಾಸಲು ಕೆಂಪು ಬಣ್ಣದ ಪಟ್ಟೆಗಳು ಅಳತೆ ಮಾಡಿ ಹಚ್ಚಿದಂತೆ ಇದ್ದುವು. ಸುಂದರವಾಗಿ ಕಾಣುವ ಪ್ರಾಣಿಗಳ ಹೃದಯ ಎಷ್ಟು ಕಠಿಣವಾಗಿದೆ! ಒಂದು ಕೊಳದಲ್ಲಿ ನಾನಾ ಗಾತ್ರ, ವರ್ಣದ ಬಾತುಗಳೂ ಕೊಕ್ಕರೆಗಳೂ ತುಂಬಿದ್ದುವು. ಕೊಳದ ಸುತ್ತಲೂ ಮೇಲ್ಭಾಗದಲ್ಲೂ ತಂತಿ ಬಿಗಿದಿದ್ದರು. ಕೆಲವು ಕೊಕ್ಕರೆಗಳ ಕಾಲುಗಳು ಬೆರಳಿನ ಗಾತ್ರ, ಒಂದೂವರೆ ಮೊಳ ಉದ್ದ ಇದ್ದುವು. ಅವುಗಳ ತಲೆ ಬಹಳ ಸಣ್ಣ ; ಕೊಕ್ಕು ಮಾತ್ರ ಒಂದು ಮೊಳದ ಉದ್ದ ಸರಿಯಾಗಿದ್ದಿತು. ಜಿರಾಫೆಯನ್ನು ನೋಡಲು ನಮ್ಮ ರಂಗಸ್ವಾಮಿ ಬೆರಗಾಗಿ ಹಾರಿಹೋದ. ಹುಡುಗರ ಗುಂಪೊಂದು ಅಲ್ಲಿದ್ದಿತು.- ಅದರ ಶರೀರ, ಬಣ್ಣ, ಸಣ್ಣದಾಗಿ ಎತ್ತರಕ್ಕೇರಿರುವ ಕತ್ತನ್ನು ಕಂಡು ಹುಡುಗರು ಆಶ್ಚರ್ಯದಿಂದ ಅದರ ಸುತ್ತಲೂ ಸುತ್ತುತ್ತಿದ್ದರು. ಹಿಪ್ಪೊಪೊಟಿಮಸ್ ಜೇರೆ ನೀರಿನಿಂದ ಮೇಲೆದ್ದಿತು. ಜನರು ಅದರ ಮಾರಗಲದ ಬಾಯನ್ನು ನೋಡಲು ಹಸುರು ಹುಲ್ಲನ್ನು ಹಾಕುತ್ತಿದ್ದರು. ಕೊಬ್ಬಿ ಅಸಹ್ಯವಾಗಿ ಕಾಣುತ್ತಿದ್ದ ಶರೀರ ಅದರದು. ಎರಡು ಒಂಟೆಗಳೂ ಎರಡು ಆಫ್ರಿಕಾದೇಶದ ಆನೆಗಳೂ ಇದ್ದುವು. ಹೊಸದಾಗಿ ಹಿಡಿದು ತಂದಿದ್ದ ಒಂದು ಸಿಂಹದ ಬಳಿ ಹೋದೆವು. ಕಬ್ಬಿಣದ ಕಂಬಿಗಳಿಂದ ಬಿಗಿದಿದ್ದ ಒಂದು ಚಿಕ್ಕ ಕೊಠಡಿಯಲ್ಲಿ ಅದು ಸೆರೆಯಾಗಿತ್ತು. ಬಡಕಲಾಗಿ ಕಾಣುತ್ತಿತ್ತು. ತಾನು ಹಿಂದೆ ಕಾಡಿನಲ್ಲಿ ಸ್ವೇಚ್ಛೆಯಾಗಿ ಬೆಳೆದು ತಿಂದು ತೇಗಿದ ದಿನಗಳನ್ನು ನೆನಪಿಗೆ ತಂದುಕೊಳ್ಳುತ್ತ ಅರೆಗಣ್ಣು ಬಿಟ್ಟುಕೊಂಡು ಮಲಗಿದ್ದಿತು. ನಾವು ಆ ಕೊಠಡಿಯ ಬಳಿ ಹೋದ ಕೊಂಚ ಹೊತ್ತಿನ ಮೇಲೆ ಅದು ಎದ್ದು ನಿಂತು ಕಣ್ಣರಳಿಸಿ ಮೌನವಾಗಿ ನಮ್ಮನ್ನು ನೋಡುತ್ತಿತ್ತು. ಆ ದೃಷ್ಟಿ ನಮ್ಮನ್ನು ಒಂದೇ ಒಂದು ತುತ್ತಿಗೆ ಗಬಕ್ಕನೆ ನುಂಗಿ ಬಿಡುತ್ತೇನೆಂದು ಸ್ಪಷ್ಟವಾಗಿ ಹೇಳುತ್ತಿತ್ತು. ಮನುಷ್ಯ ಎಂಥ ದುಷ್ಟ ಮೃಗವನ್ನಾದರೂ ಪಳಗಿಸಬಲ್ಲನು! ದೊಡ್ಡ ದೊಡ್ಡ ಕಾಡಾನೆಗಳನ್ನು ಹಿಡಿದು ಅವುಗಳಿಗೆ ನರಕಹಿಂಸೆ ಕೊಟ್ಟು, ಪಳಗಿಸುತ್ತಾನೆ! ಅವುಗಳಿಂದ ಅಸಾಧ್ಯವಾದ ಕೆಲಸಗಳನ್ನೂ ಮಾಡಿಸುತ್ತಾನೆ. ಈ ಸಣ್ಣ ಮನುಷ್ಯ ಅಕಸ್ಮಾತ್ತಾಗಿ ಕಾಡಿನಲ್ಲಿ ಸಿಕ್ಕಿದರೆ ಆನೆ ಸೊಂಡಿಲಿನಿಂದ ಹಿಡಿದು ಒಂದೇ ಒಂದು ಬಡಿತಕ್ಕೆ ಪ್ರಾಣ ತೆಗೆಯುತ್ತದೆ. ಇವನ ಹಿಡಿತಕ್ಕೆ ಆನೆ ಸಿಕ್ಕಿದರೆ

ಆದನ್ನು ಗಡಗಡನೆ ನಡುಗಿಸುತ್ತಾನೆ! ಹೇಳಿದ ಹಾಗೆ ಅದು ಕೇಳುವಂತೆ ಪಳಗಿಸುತ್ತಾನೆ!

ನಾವು ಹಾವಿನ ಮನೆಯಿದ್ದಲ್ಲಿಗೆ ಹೋದೆವು. ಎರಡು ಹೆಬ್ಬಾವುಗಳು ಮುದುರಿಕೊಂಡು ಕುಂಭಕರ್ಣನ ಹಾಗೆ ಬಿದ್ದಿದ್ದುವು. ಎರಡು ಮೂರು ನಾಗರ ಹಾವುಗಳಿದ್ದುವು. ನಾಗರ ಹಾವೆಂದರೆ ನೆನಪಿಗೆ ಬರುತ್ತದೆ. ಅದನ್ನು ಹೇಳದೆ ಬಿಡುವ ಹಾಗೇ ಇಲ್ಲ. ೧೯೫೦ ನೆ ಇಸವಿ ಸೆಪ್ಟೆಂಬರ್‌ನಲ್ಲಿ ಆಚರಿಸಿದ ಮೈಸೂರು ದಸರಾದಲ್ಲಿ ಒಬ್ಬ ಹಾವಾಡಿಗ ಒಂದು ಕಾಳಿಂಗ ನಾಗರ ಹಾವನ್ನು ತಂದು ಮೈಸೂರು ಪುರಭವನದ ಎದುರು ಪ್ರದರ್ಶಿಸಿದ್ದ. ಬರಿ ಒಂದು ಆಣೆ ಟಿಕೆಟ್ಟು ಒಬ್ಬೊಬ್ಬರಿಗೆ. ನಾನು ಡೇರಾಕ್ಕೆ ನುಗ್ಗಿದೆ. ಮೈ ಜುಂ ಎಂದಿತು! ಹಾವು ಕಂಡರೆ ಹಡಗು ನಡುಗಿತಂತೆ! ಜೀವವಿಲ್ಲದ ವಸ್ತುವೆ ನಡುಗುವಾಗ ಮನುಷ್ಯನನ್ನು ಕೇಳಬೇಕೆ? ಸರಿಯಾಗಿ ಆರು ಮೊಳ ಉದ್ದ, ಒನಕೆ ಗಾತ್ರ ದಪ್ಪ, ಕರಿಯ ಮೈ ಮೇಲೆ ಒಂದು ಕಾಸಿನ ಅಗಲದ ಬಿಳಿಯ ಚಿಕ್ಕೆಗಳು, ತಲೆ ದೊಡ್ಡ ಮಾವಿನ ಕಾಯಿಗಾತ್ರ. ಒಂದು ಮೊಳದುದ್ದದ ವರೆಗೆ ಕತ್ತೆತ್ತಿಕೊಂಡು ಚಲಿಸದೆ ನಿಂತಿದ್ದಿತು. ಶಿವಮೊಗ್ಗ ಡಿಸ್ಟ್ರಿಕ್ಟಿನ ಕುಂಶಿ ಕಾಡಿನಲ್ಲಿ ಹಿಡಿದು ತಂದಿದ್ದರು. ಅದರ ಆಕೃತಿ ಇನ್ನೂ ನನ್ನ ಮನಸ್ಸಿನಿಂದ ಅಳಿಸಿ ಹೋಗಿಲ್ಲ.

ನಮ್ಮ ದೇಶದಲ್ಲಿ ವರ್ಷವೊಂದಕ್ಕೆ ವಿಷದ ಹಾವುಗಳು ಕಡಿದು ಸುಮಾರು ನಾಲ್ಕೈದು ಸಾವಿರ ಜನರು ಸಾಯುತ್ತಾರೆ. ವಿಷ ಸರ್ಪಗಳು ಕಚ್ಚಿದರೆ ಅಲೋಪತಿಯಲ್ಲಾಗಲಿ, ಹೋಮಿಯೊಪತಿಯಲ್ಲಾಗಲಿ ಔಷಧವೆ ಇಲ್ಲ. ಆಯುರ್ವೇದದಲ್ಲಿ ಮಾತ್ರ ಇದೆ. ಇದಕ್ಕಿಂತಲೂ ಹೆಚ್ಚಾದದ್ದು ಮಂತ್ರ! ನಮ್ಮ ಹಳ್ಳಿಗಾಡಿನಲ್ಲಿ ಜನರಿಗೆ ಆಗಾಗ್ಗೆ ನಾಗರ ಹಾವುಗಳು ಕಡಿಯುತ್ತವೆ. ಹಳ್ಳಿಗಳಲ್ಲಿ ಕೆಲವರು ಹಾವಿನ ಮಂತ್ರವನ್ನು ಜಪಿಸಿ ಕಾಲು ಘಂಟೆ ಅಥವಾ ಅರ್ಧ ಘಂಟೆಗಳಲ್ಲಿ ಮನುಷ್ಯನ ರಕ್ತದಲ್ಲಿ ವ್ಯಾಪಿಸಿದ್ದ ವಿಷವನ್ನು ಇಳಿಸಿ ಬಿಡುತ್ತಾರೆ. ನಮ್ಮ ಪೂರ್ವಿಕರು ಎಂಥ ದಿವ್ಯ ಔಷಧವನ್ನು ಕಂಡುಹಿಡಿದಿದ್ದಾರೆ! ಅದರಿಂದ ಮನುಷ್ಯವರ್ಗಕ್ಕೆ ಹೆಚ್ಚಿನ ಪ್ರಯೋಜನವಾಗುತ್ತದೆಂದು ಕಾಣುತ್ತದೆ.

ಪ್ರಾಣಿಶಾಸ್ತ್ರದ ಮೇಲೆ ಸಂಶೋಧನೆ ನಡಸಿದವರು ನಮ್ಮ ದೇಶದಲ್ಲಿ ಬಹಳ ಕಡಿಮೆ. ಪರದೇಶದ ಪ್ರಾಣಿಶಾಸ್ತ್ರಜ್ಞರು ನಮ್ಮ ದೇಶದ ಪ್ರಾಣಿಗಳ ಮೇಲೆ ಸಂಶೋಧನೆ ನಡೆಸಿ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಬಂಗಾಳ

ದಲ್ಲಿ ಈಗ್ಗೆ ಒಂದು ಶತಮಾನಗಳ ಹಿಂದೆ ವಿಷದ ಹಾವುಗಳ ಮೇಲೆ ಇಬ್ಬರು ಪ್ರಾಜ್ಞರು ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆದಿದ್ದಾರೆ.

ಮೈಸೂರಿನ ಪ್ರಾಣಿಸಂಗ್ರಹಶಾಲೆಗಿಂತ ಹೆಚ್ಚೇನೂ ಇಲ್ಲಿ ಇರಲಿಲ್ಲ. ನಾವು ನೋಡಿದ ಪ್ರಾಣಿಗಳಲ್ಲಿ ಒಂದು ಜಾತಿ ಮಾತ್ರ ವಿಚಿತ್ರವಾದುದು. ಅದಕ್ಕೆ ಆಂಗ್ಲ ಭಾಷೆಯಲ್ಲಿ 'Mouse deer' ಎಂದು ಹೆಸರು. ಒಂದು ಗೇಣುದ್ದ ಅದರ ಎತ್ತರ. ಅದರ ತಲೆ ಹೆಗ್ಗಣದ ತಲೆ, ಶರೀರ ಜಿಂಕೆಯದು ; ಕಾಲುಗಳು ಸಣ್ಣಗೆ ಜಿಂಕೆಯ ಕಾಲಿನಂತೆ ; ಗೊರಸುಗಳಿದ್ದುವು. ಈ ಆಶ್ಚರ್ಯಕ್ಕಿಂತಲೂ ಮತ್ತೊಂದು ಆಶ್ಚರ್ಯ ಅಲ್ಲಿ ನೋಡಿದ್ದು ! 'ದೊಂಗಲುನ್ನಾರು ಜಾಗ್ರತ' (ಕಳ್ಳರಿದ್ದಾರೆ ಎಚ್ಚರಿಕೆ !) ಎಂದು ಬರೆದು ಮರಮರಕ್ಕೂ ನೇತು ಹಾಕಿದ್ದ ಹಲಗೆಗಳು. ಆ ಬೋರ್ಡನ್ನು ಓದಿದ ಕೂಡಲೆ ಅಲ್ಲಿ ಬಂದಿದ್ದ ಅನೇಕರೂ ಮತ್ತು ನಾವೂ ನಮ್ಮ ನಮ್ಮ ಜೇಬುಗಳನ್ನು ಭದ್ರಪಡಿಸಿಕೊಂಡೆವು. ನಮ್ಮ ಹಾಗೆ ಬಂದಿದ್ದ ಜನರು ನಮ್ಮನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದರು. ನಾವೂ ಅವರನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದೆವು. ಆ ಬೋರ್ಡಿನ ಮಹಾತ್ಮೆ ಸತ್ಯವಂತರಿಗೂ ಸಂಶಯ ಪಿಶಾಚಿ ಹಿಡಿಸಿಬಿಡುತ್ತದೆ !

ಅಲ್ಲಿಂದ ಹನ್ನೊಂದು ಘಂಟೆಗೆ ಹೊರಬಿದ್ದೆವು. ಬಿಸಿಲು ಸಹಿಸಲು ಅಸಾಧ್ಯವಾಗಿತ್ತು. ರಸ್ತೆಗಳಲ್ಲಿ ಅಲ್ಲಲ್ಲಿ ಕೆಲವರು ಸನ್ಯಾಸಿಗಳಂತೆ ಮೀಸ್ನೆ ಗಡ್ಡಗಳನ್ನು ಬೆಳೆಸಿಕೊಂಡು, ಕೊಳಕು ಕಾವಿಬಟ್ಟೆಯ ನಿಲುವಂಗಿಯನು ಹಾಕಿಕೊಂಡು ಜ್ಯೋತಿಷ್ಯಶಾಸ್ತ್ರದ ಪುಸ್ತಕಗಳನ್ನು ತೆರೆದು ಕೊಂಡು ಜನರಿಗೆ ಹಸ್ತಸಾಮುದ್ರಿಕವನ್ನು ಹೇಳುತ್ತಿದ್ದರು. ಏನೇನೊ ಅಂಕಿಗಳನ್ನು ಹಲಗೆಗಳ ಮೇಲೆ ಬಳಪದಿಂದ ಬರೆದು ಕೂಡಿ ಕಳೆದು ಬಂದಿದ್ದ ಜನರ ಬಾಳಿನ ಭವಿಷ್ಯವನ್ನು ಹೇಳುತ್ತಿದ್ದರು. ಜೀವನದ ಹೋರಾಟದಲ್ಲಿ ನೊಂದ ಮನುಷ್ಯನಿಗೆ ಜ್ಯೋತಿಷ್ಯಶಾಸ್ತ್ರ ಬಲು ಹಿತವಾಗಿ ಕಾಣುತ್ತದೆ. ಜ್ಯೋತಿಷ್ಯನು ಹೇಳಿದಂತೆ ಗಾಳಿಗೋಪುರವನ್ನು ಕಟ್ಟಿಕೊಂಡು ಕ್ಷಣಕಾಲವಾದರೂ ಸಮಾಧಾನ ಹೊಂದುತ್ತಾನೆ !

ನಾವು ಹಾಗೆಯೆ ಚೈನಾ ಬಜಾರಿಗೆ ಬಂದೆವು. ಪ್ರಪಂಚದಲ್ಲಿ ತಯಾರಾಗುವ ನಾಜೋಕಿನ ಬಟ್ಟೆಗಳೂ ಸಾಮಾನುಗಳೂ ಪ್ರತಿಯೊಂದು ಅಂಗಡಿಗಳಲ್ಲೂ ಸಾಲುಸಾಲಾಗಿ ಜೋಡಿಸಲ್ಪಟ್ಟಿದ್ದುವು. ಒಂದು ಅಂಗಡಿಗಿಂತ ಒಂದು ಮೇಲು—ಸಾಮಾನು ತುಂಬಿರುವುದರಲ್ಲಿ. ಆ ಬೀದಿ ಮದ್ರಾಸಿನಲ್ಲಿ

ದೊಡ್ಡ ವ್ಯಾಪಾರದ ಸ್ಥಳ. ನಾವು ಒಂದು ಅಂಗಡಿಗೆ ಹೋದೆವು. ಲಕ್ಷ್ಮಿ ಒಂದು ಸೀರೆಯನ್ನು ತೆಗೆಸಿ ಬೆಲೆ ಕೇಳಿದಳು. ಅಂಗಡಿಯವನು ನಲವತ್ತು ರೂಪಾಯಿ ಖಚಿತವಾದ ಬೆಲೆ ಎಂದು ಹೇಳುತ್ತ ಸೀರೆಗೆ ಅಂಟಿಸಿದ್ದ ಬೆಲೆಯ ಚೀಟಿಯನ್ನು ತೋರಿಸಿದ. ಸೀರೆ ನೋಡುವುದಕ್ಕೆ ಡಬ್ಬಾಗಿತ್ತು; ಕೃತಕ ರೇಶಿಮೆಯದು. ಅಂಗಡಿಯ ಒಳಗಡೆ ಹಾಕಿದ್ದ ವಿದ್ಯುಚ್ಛಕ್ತಿಯ ದೀಪಗಳಿಂದ ಸೀರೆ ಮಿರುಗುತ್ತಿತ್ತು. ಸಾಚಾ ರೇಶಿಮೆಯನ್ನು ಮೀರಿಸಿತ್ತು. ನಾನು ಮೂವತ್ತು ರೂಪಾಯಿಗೆ ಕೇಳಬೇಕೆಂದು ಬಾಯಿಬಿಡುವಷ್ಟರಲ್ಲೇ ಲಕ್ಷ್ಮಿ "ಇಪ್ಪತ್ತೈದು ರೂಪಾಯಿಗೆ ಕೊಡುತ್ತೀರಾ ?" ಎಂದಳು. ನಮ್ಮ ಸಂಗಡ ಬಂದಿದ್ದ ಬಂಧುಗಳು "ಅದೂ ಹೆಚ್ಚಾಯಿತು" ಎಂದು ಗೊಣಗುಟ್ಟಿದರು. ಅಂಗಡಿಯವನು "ಎಲ್ಲಾದರೂ ಉಂಟೆ! ಹದಿನೈದು ರೂಪಾಯಿ ಲಾಭ ಇಡುತ್ತೇವೆಯೆ? ಒಂದು ಸೀರೆಗೆ" ಎಂದು ಹಲ್ಲು ಕಿರಿದ.

"ಎಷ್ಟು ಮೊಳ ಇದೆ?" ಎಂದು ಕೇಳಿದಳು ಲಕ್ಷ್ಮಿ.

"ಏಳು ಗಜ ಇದೆ. ಬೇಕಾದರೆ ನೋಡಿಕೊಳ್ಳಿ. ನಮ್ಮದು ಬಹಳ ನಂಬಿಕೆಯ ಅಂಗಡಿ" ಎಂದ.

"ಇಪ್ಪತ್ತೈದು ರೂಪಾಯಿನ ಮೇಲೆ ಬೇಡಪ್ಪಾ" ಎಂದು ನಾವು ಹೊರಟೆವು. ಅಂಗಡಿಯನ್ನು ಬಿಟ್ಟು ತುಸು ದೂರ ಬಂದಮೇಲೆ ಆ ವ್ಯಾಪಾರಿ ನಮ್ಮನ್ನು ಕೂಗಿ ಆ ಸೀರೆಯನ್ನು ಕಟ್ಟಿ ಬಿಲ್ಲನ್ನು ನಮ್ಮ ಕೈಗೆ ಕೊಟ್ಟುಬಿಟ್ಟನು. ದುಡ್ಡು ಕೊಟ್ಟು ಸೀರೆಯನ್ನು ತೆಗೆದುಕೊಂಡು ಮನೆಗೆ ಹೊರಟೆವು. ಮನೆಯಲ್ಲಿ ನಮ್ಮ ಬಂಧುಗಳ ಹೆಂಗಸರು ಸೀರೆಯನ್ನು ನೋಡಿದರು. ಹೆಂಗಸರ ಸ್ವಭಾವ ಕೇಳಬೇಕೆ! ಹೊಸ ಒಡವೆ ಬಟ್ಟೆ ಅವರ ಕಣ್ಣಿಗೆ ಬಿದ್ದರೆ ಕೊಂಡುಕೊಳ್ಳದಿದ್ದರೂ ನೋಡಿಯೇ ತೀರಬೇಕು. ಆ ಮೇಲೆ ಶುರು—ನನಗೆ ಅದೇ ಸೀರೆ ಬೇಕು, ಇವೇ ಒಡವೆ ಬೇಕು—ಅಂತ.

"ಐದು ರೂಪಾಯಿ ಹೆಚ್ಚಾಗಿ ಕೊಟ್ಟಿದ್ದೀರಿ" ಎಂದರು ಹೆಂಗಸರು.

"ಕೊಟ್ಟದ್ದಾಯಿತು. ಹೋಗಲಿ ಬಿಡಿ" ಎಂದೆ ನಾನು. ಸರಿ, ಅದನ್ನು ಮೊಳದಿಂದ ಅಳತೆ ಮಾಡಿದರು. ಸರಿಯಾಗಿ ಹನ್ನೆರಡು ಮೊಳ ಇದ್ದಿತು. ಹದಿನಾಲ್ಕು ಮೊಳದ ಸೀರೆ ಮನೆಗೆ ತರುವಷ್ಟರಲ್ಲೆ ಹನ್ನೆರಡು ಮೊಳವಾಗಿತ್ತು! ಆ ಮಧ್ಯಾಹ್ನವೂ ಒಳ್ಳೊಳ್ಳೆ ಊಟವಾಯಿತು. ಇಂತಹ ಊಟ ದಿನ ಹಾಕುತ್ತಿರುವಾಗ ಮೂರು ನಾಲ್ಕು ತಿಂಗಳು ಮದರಾಸಿನಲ್ಲೆ ತಂಗಿ ಮೈ ಬೆಳಸಿಕೊಂಡು ಮೈಸೂರಿಗೆ ಬರಬಹುದಲ್ಲ ಎಂದುಕೊಂಡೆ.

ಆದರೆ ಮನುಷ್ಯನು ತಾನು ದುಡಿದು ಅದರಿಂದ ಜೀವಿಸಬೇಕು! ಅಲ್ಲಿರು ವುದು—ಸುಖ, ಸಂತೋಷ.

ಸಾಯಂಕಾಲ ಮೆರಿನಾ ಬೀಚಿಗೆ ಪುನಃ ಹೋದೆವು. ಅಷ್ಟರಲ್ಲಿ ಅನೇಕ ಸ್ತ್ರೀಪುರುಷರು ಮರಳು ದಿಬ್ಬದ ಮೇಲೆ ಕುಳಿತು ವಿಶಾಲವಾಗಿ ಕಾಣುತ್ತಿದ್ದ ನೀಲ ಸಮುದ್ರವನ್ನು ನೋಡುತ್ತಿದ್ದರು. ಮತ್ತೆ ಕೆಲವರು ದಿಬ್ಬದ ಮೇಲೆ ಉದ್ದಕ್ಕೆ ಹೋಗುತ್ತಲೂ ಬರುತ್ತಲೂ ಇದ್ದರು. ಕೆಲವರು ಹರಯದ ದಂಪತಿಗಳು; ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಆಗಾಗ್ಗೆ ಗುಲ ಗುಲನೆ ನಗುತ್ತಿದ್ದರು. ಹೊಸದಾಗಿ ವಿವಾಹವಾಗಿದ್ದ ದಂಪತಿಗಳಿಬ್ಬರು ನಮ್ಮ ಪಕ್ಕಕ್ಕೆ ಬಂದು ಕುಳಿತರು. ತಾರುಣ್ಯದ ಹೊಸ್ತಿಲನ್ನು ಮೆಟ್ಟು ತ್ತಿದ್ದ ಅವರು, ಅಕ್ಕಪಕ್ಕದಲ್ಲಿ ಕುಳಿತಿದ್ದವರನ್ನು ಮರೆತು, ಒಬ್ಬರ ಕಿವಿ ಯನ್ನೊಬ್ಬರು ಕಚ್ಚಿಕೊಂಡು ಮಾತನಾಡುತ್ತಿದ್ದರು. ಪತಿ ತನ್ನ ರಾಣಿಯ ಜಡೆಯನ್ನು ಆಗಾಗ್ಗೆ ತುಯ್ದು ನಗುತ್ತಿದ್ದ. ಸತಿ ಹುಸುನಗೆಯಿಂದ ಗಂಡನ ಪ್ರೇಮದ ದೃಷ್ಟಿಗೆ ತನ್ನ ದೃಷ್ಟಿಯನ್ನು ಬೆರಸುತ್ತಿದ್ದಳು. ಪಾಪ, ಯೌವನದ ಸೊಕ್ಕಿನಲ್ಲಿ ಪ್ರಪಂಚದ ಅರಿವೆಲ್ಲಾಗುತ್ತದೆ? ಅಲೆಗಳು ಒಂದರಮೇಲೊಂದು ಮೊರೆಯುತ್ತ ಬರುತ್ತಿದ್ದವು. ನಾವು ಸಮುದ್ರದ ವೈಶಾಲ್ಯವನ್ನು ಅರೆಗಣ್ಣಿ ನಿಂದ, ತೆರೆಗಣ್ಣಿನಿಂದ ನೋಡುತ್ತಾ ಕುಳಿತೆವು. ನಾಲ್ಕೈದು ದೋಣಿಗಳಲ್ಲಿ ಬೆಸ್ತರು ಮೀನು ಹಿಡಿಯುತ್ತಿರುವುದು ಮಸಕುಮಸಕಾಗಿ ಕಾಣುತ್ತಿತ್ತು. ಆ ದೋಣಿಗಳು ದೂರವಾದಂತೆಲ್ಲ ಚಿತ್ರವು ಮಬ್ಬುಮಬ್ಬಾಗಿ ಕೊನೆಗೆ ಸಮುದ್ರದ ಅಂಚಿನಲ್ಲಿ ಮುಳುಗಿಹೋಯಿತು. ಆ ಬೆಸ್ತರ ಸಾಹಸವನ್ನು ನೋಡಿ ನಾನು ಬೆಪ್ಪು ಹಿಡಿದವನಂತೆ ಕುಳಿತುಬಿಟ್ಟೆ. ಮನುಷ್ಯ ಹೊಟ್ಟೆಪಾಡಿಗಾಗಿ ಎಷ್ಟು ಧೈರ್ಯ ಸಾಹಸಗಳಿಂದ ಜೀವದ ಹಂಗು ತೊರೆದು ಹೋಗುತ್ತಾನೆ! ದೊಡ್ಡ ದೊಡ್ಡ ಹಡಗುಗಳು ಸಮುದ್ರದ ಮೇಲೆ ಹೋಗುವಾಗ ಅವುಗಳನ್ನು ಸಮುದ್ರದ ಕಳ್ಳರು ಮುತ್ತಿಗೆ ಹಾಕುತ್ತಾರೆ. ಆ ಕಳ್ಳರು ಸಮುದ್ರದಲ್ಲೇ ಈಜುತ್ತಾ ತಲೆಮರೆಸಿಕೊಂಡಿದ್ದು ಹಾಗೆ ಧಾಳಿ ಮಾಡುತ್ತಾರೆ. ಮಾಡು ವುದು ಕಳ್ಳತನವಾದರೂ ಅದು ಎಂಥ ಸಾಹಸ ಕಾರ್ಯ! ಹಸಿವು ಮನುಷ್ಯ ನನ್ನು ಎಲ್ಲಿಯ ತನಕ ಎಳೆದುಕೊಂಡು ಹೋಗುತ್ತದೆ! ಹಸಿವನ್ನು ಅಡಗಿಸಿ ಕೊಳ್ಳುವುದಕ್ಕೆ ಹೋಗಿ ಜೀವವನ್ನೆ ಕಳೆದುಕೊಳ್ಳುತ್ತಾರೆ.

ನಾವು ಏಳು ಘಂಟೆಗೆ ಅಲ್ಲಿಂದ ಹೊರಟು ಜನರ ಗುಂಪಿನ ಮಧ್ಯೆ ನುಗ್ಗಿ ಮನೆ ಸೇರಿದೆವು.

ಅವಸರವಾಗಿ ಊಟ ಮಾಡಿಕೊಂಡು ರೈಲ್ವೆ ನಿಲ್ದಾಣಕ್ಕೆ ಹೊರಟೆವು. ನಮ್ಮ ಬಂಧುಗಳು "ನಾಳೆ ಹೋಗಿ" ಎಂದು ಹೇಳಿ ಹೇಳಿ, ಹಾಗೂ ನಾವು ಗಂಟನ್ನು ತೆಗೆದುಕೊಂಡು ಈ ದಿನವೆ ಹೋಗುತ್ತೇವೆಂದು ಹೊರಟದ್ದನ್ನು ನೋಡಿ ತೆಪ್ಪಗಾದರು. ದಾರಿಯಲ್ಲಿ ಇಪ್ಪತ್ತೈದು ಸಾತಕುಡಿ ಹಣ್ಣುಗಳನ್ನು ಕೊಂಡೆವು. ಈ ಹಣ್ಣುಗಳು ಕಿತ್ತಲೆ ಹಣ್ಣುಗಳ ಗಾತ್ರ ಇವೆ. ಬಣ್ಣ ಹಸುರು; ಸಿಹಿಯಾಗಿವೆ. ಮದ್ರಾಸು ಕಡೆ ಈ ಹಣ್ಣುಗಳು ಅಗ್ಗವಾಗಿ ಮಾರಲ್ಪಡುತ್ತವೆ. ರೈಲ್ವೆ ನಿಲ್ದಾಣದಲ್ಲಿ ಪ್ರಯಾಣಿಕರೂ, ಅವರನ್ನು ಸಾಗಹಾಕಲು ಬಂದಿದ್ದ ಬಂಧುಗಳೂ ಮಿತ್ರರೂ ಲೆಕ್ಕವಿಲ್ಲದಷ್ಟಿದ್ದರು. ಬೆಂಗಳೂರಿಗೆ ಟಿಕೆಟ್ಟನ್ನು ಕೊಂಡು ಗಾಡಿಯು ನಿಂತಿದ್ದ ಪ್ಲಾಟ್‌ಫಾರಂಗೆ ಹೋದೆವು. ಪ್ರತಿಯೊಂದು ಪೆಟ್ಟಿಗೆಯಲ್ಲೂ ಜನರು ಕಿಕ್ಕಿರಿದು ತುಂಬಿದ್ದರು. ನಾವು ಬಂಡಿಯನ್ನು ಏರುವುದಕ್ಕೆ ಪೆಟ್ಟಿಗೆಗಳನ್ನು ಹುಡುಕುತ್ತಿರುವಷ್ಟರಲ್ಲೆ ಗಂಟೆ ಬಾರಿಸಿತು. ರೈಲುಗಾಡಿಯೂ ತಕ್ಷಣವೇ ಹೊರಟುಬಿಟ್ಟಿತು. ಆಗ ಒಂಬತ್ತು ಘಂಟೆಯಾಗಿತ್ತು. ನಾವು ಪೆಚ್ಚಾದೆವು! ಐದು ನಿಮಿಷ ಮೊದಲೇ ಬಂದಿದ್ದರೆ ಹೊರಟುಬಿಡಬಹುದಾಗಿತ್ತು ಎಂದುಕೊಂಡು ಟಿಕೆಟ್ಟನ್ನು ಸ್ಟೇಷನ್ನಲ್ಲಿ ವಾಪಸ್ಸುಕೊಟ್ಟೆವು. ಟಿಕೆಟ್ ಕೊಡುತ್ತಿದ್ದವನು ಟಿಕೆಟ್ ಒಂದಕ್ಕೆಒಂದೊಂದು ಆಣೆ ಹಿಡಿದುಕೊಂಡು ದುಡ್ಡು ಕೊಟ್ಟುಬಿಟ್ಟ. ನಮ್ಮ ಬಂಧುಗಳಿಗೇನೊ ಸಂತೋಷವೇ ಆಯಿತು. "ನಾಳೆ ನಾವು ತಿರುಪತಿಯ ತೀರ್ಥಪ್ರಸಾದ ತೆಗೆದುಕೊಳ್ಳುತ್ತೇವೆ. ನಾಳೆ ರಾತ್ರಿ ರೈಲಿಗೆ ಹೊರಟುಬಿಡಿ" ಎಂದರು. ನಾವು ನಿಧಾನವಾಗಿ ಮನೆಯನ್ನು ತಲಪಿದೆವು. ಹೆಂಗಸರು "ನೋಡಿದಿರಾ, ತಡೆಯುವಾಗ ಪ್ರಯಾಣ ಹೊರಡಬಾರದು" ಎಂದರು. ಸೆಕೆ ನನ್ನನ್ನು ಎಲ್ಲಿ ಬಿಡುತ್ತದೆ? ಸೆಕೆಯನ್ನು ಹೇಗೊ ಸಹಿಸಿಕೊಂಡು ಆ ರಾತ್ರಿಯನ್ನು ಕಳೆದೆವು. ನಮ್ಮ ಬಂಧುಗಳ ಮನೆ ಮಕ್ಕಳು ಆದಿಯಾಗಿ ಎಲ್ಲರೂ ಬೆಳಗ್ಗೆ ಸ್ನಾನ ಮಡಿ ಮಾಡಿಕೊಂಡರು. ಒಳ್ಳೆ ಪಾಯಸದ ಅಡುಗೆಯನ್ನೇ ಮಾಡಿದರು. ನಾವು ತಿರುಪತಿಯಿಂದ ತಂದಿದ್ದ ತೀರ್ಥದ ಚೆಂಬನ್ನು ಪೂಜಿಸಿ ಅದರ ಮುಸುಕನ್ನು ಸ್ವಲ್ಪವೆ ತೆರೆದೆವು. ಎಲ್ಲರಿಗೂ ತೀರ್ಥವನ್ನುಹಂಚಿದ್ದಾಯಿತು.

"ತಿರುಪತಿ ವೆಂಕಟರಮಣಸ್ವಾಮಿ ಮಾಯಕಾರ!" ಎಂದರು ಸಿಂಗ್ರಪ್ಪನವರು.

"ಹಾಗಿಲ್ಲದಿದ್ದರೆ ದಿನ ಬೆಳಗಾದರೆ ಅಷ್ಟೊಂದು ಜನ ಯಾತ್ರಿಕರು ಬರುತ್ತಾರೇನಪ್ಪಾ!" ಎಂದಳು ಲಕ್ಷ್ಮಿ.

“ ನಮ್ಮ ಊರಿನ ಮೇಗಲ ಮನೆ ರಂಗಮ್ಮನ ಕಥೆ ಕೇಳಿದ್ದಿಯೇ ನವ್ವಾ? ”

“ ಅದೇನಪ್ಪ! ನಾನು ಕೇಳಲಿಲ್ಲವಲ್ಲ. ಅವಳು ಸತ್ತು ಬಹಳ ವರ್ಷಗಳಾದುವಂತೆ.”

“ ನೀವೆಲ್ಲ ಸಣ್ಣ ಮಕ್ಕಳು. ಆಗ ಅವಳಿಗೆ ನಲವತ್ತು ವರ್ಷವಯಸ್ಸು. ಈಗಿದ್ದಾಳಲ್ಲ ಪುಟ್ಟಮ್ಮ. ಅವಳು ಒಬ್ಬಳೇ ಮಗಳು. ಪುಟ್ಟಮ್ಮನನ್ನು ಒಬ್ಬ ಹುಡುಗನಿಗೆ ಮದುವೆ ಮಾಡಿ ತನ್ನ ಮನೆಯಲ್ಲಿಯೆ ಅಳಿಯನನ್ನೂ ಮಗಳನ್ನೂ ಇರಿಸಿಕೊಂಡಿದ್ದಳು, ರಂಗಮ್ಮ. ಈಕೆಯ ಗಂಡ ಬಡವರ ತಲೆ ಒಡೆದು ಹತ್ತು ಎಕರೆ ಗದ್ದೆಯನ್ನು ನಮ್ಮೂರಿನ ಕೆರೆ ಕೆಳಗಡೆ ಸಂಪಾದಿಸಿದ್ದ. ಒಂದು ದಿನ ಪಾಪಯ್ಯನವರ ಮನೆಯವರೆಲ್ಲ ತಿರುಪತಿ ಯಾತ್ರೆ ಹೊರಟರು. ಪುಟ್ಟಮ್ಮನಿಗೆ ಪ್ರಸ್ತವಾಗಿ ಐದು ವರ್ಷಗಳಾಗಿದ್ದರೂ ಗರ್ಭಿಣಿಯಾಗಲಿಲ್ಲ. ಆ ಹುಡುಗಿ ಮನಸ್ಸಿನಲ್ಲೆ ಪ್ರಾರ್ಥನೆ ಮಾಡಿಕೊಂಡಿದ್ದಳೆಂದು ಕಾಣುತ್ತದೆ, ತನಗೆ ಮಕ್ಕಳಾದರೆ ತಿರುಪತಿ ಯಾತ್ರೆಗೆ ಬರುತ್ತೇನೆಂದು. ಪಾಪಯ್ಯನ ಮನೆಯ ಹೆಂಗಸರೂ ಮಕ್ಕಳೂ ಹೊರಟಾಗ ಪುಟ್ಟಮ್ಮ ಅವರ ಸಂಗಡ ಯಾತ್ರೆ ಹೋಗುತ್ತೇನೆಂದು ತಾಯಿಯನ್ನು ಬಹಳ ಬೇಡಿಕೊಂಡಳು. ‘ ಪಾಪಯ್ಯನ ಮನೆಯವರಿಗೂ ನಿನಗೂ ಕೆಲಸವಿಲ್ಲ ಕಾಣೆ. ತಿರುಪತಿ ತಿಮ್ಮಪ್ಪ ಮಕ್ಕಳನ್ನು ಹೆತ್ತು ಸಾಕಿದ್ದಾನೆಯೆ? ನಿನಗೆ ಕೊಡುವುದಕ್ಕೆ. ಅಲ್ಲಿಗೆ ಹೋಗಿ ಬರಬೇಕಾದರೆ ವಸಿ ದುಡ್ಡು ಕರ್ಚಾದಾದೇ! ತೆಪ್ಪನೆ ಬಾಯಿ ಮುಚ್ಚಿಕೊಂಡಿರೆ. ಈಗ ಹೋಗ್ತಾರಲ್ಲ ಅವರಿಗೆ ಹೊರಿಸಲಿ ವೆಂಕಟರಮಣಸ್ವಾಮಿ ’ ಎಂದು ಮಗಳ ಬಾಯಿ ಮುಚ್ಚಿಸಿದಳು. ಪುಟ್ಟಮ್ಮ ಮರು ಮಾತಾಡದೆ ಮನಸ್ಸಿನಲ್ಲಿ ಬಹುವಾಗಿ ನೊಂದುಕೊಂಡು ತೆಪ್ಪಗಾದಳು. ಗಂಡನ ಸಂಗಡ ತನ್ನ ದುಃಖವನ್ನು ತೋಡಿಕೊಂಡಳು. ಅತ್ತೆಯ ಹಂಗಿನಲ್ಲಿರುವ ಅವನು ಹೆಂಡತಿಯ ಆಸೆಯನ್ನು ನೆರವೇರಿಸುವಷ್ಟು ಸ್ವತಂತ್ರನಾಗಿರಲಿಲ್ಲ.

‘ ಹೋಗಲಿ ಬಿಡು. ಮತ್ತೊಂದು ಸಾರಿ ನಾವು ಇಬ್ಬರು ಹೋಗುವ ’ ಎಂದು ಹೆಂಡತಿಯನ್ನು ಸಮಾಧಾನ ಪಡಿಸಿದ. ಹೀಗಿರುವಾಗ ಒಂದು ವರ್ಷ ಕಳೆದಿರಬೇಕು. ಒಂದು ದಿನ ರಂಗಮ್ಮ ತಮ್ಮ ಗದ್ದೆ ಬೆಳೆದಿದ್ದುದನ್ನು ನೋಡಲು ಹೋಗಿ ತೆವರಿನ ಮೇಲೆ ನಡೆದು ಹೋಗುತ್ತಿದ್ದಾಗ ಹಸುರು ಹುಲ್ಲಿನಲ್ಲಿ ಮಲಗಿದ್ದ ಒಂದು

ನಾಗರ ಹಾವು ಕಚ್ಚಿತು. ಹಾವು ಕಚ್ಚಿದ ತಕ್ಷಣ ಬಾಯಿ ಬಾಯಿ ಬಡಿದುಕೊಂಡು ಗದ್ದೆಯೊಳಗೆ ಬಿದ್ದುಬಿಟ್ಟಳು, ಅವಳು. ಅಕ್ಕಪಕ್ಕದ ಗದ್ದೆಗಳಲ್ಲಿ ಕೆಲಸಮಾಡುತ್ತಿದ್ದವರು ಓಡಿಬಂದು ನೋಡಿದರು. 'ಹಾವು ಕಚ್ಚಿತೆಂದು ಹೇಳಿದಳು. ಶರೀರವೆಲ್ಲ ಬೆವರುತ್ತಿತ್ತು. ತಕ್ಷಣವೆ ಅವಳನ್ನು ಊರಿಗೆ ಸಾಗಿಸಿಕೊಂಡು ಬಂದರು. ಅಷ್ಟರಲ್ಲಿ ಅವಳಿಗೆ ಪ್ರಜ್ಞೆ ಇರಲಿಲ್ಲ. ಬಾಯಲ್ಲಿ ಜೊಲ್ಲು ಸುರಿಯುತ್ತಿತ್ತು. ಓಡಿ ಹೋಗಿ ನೋಡಿದೆ. ನಮ್ಮೂರಿನ ಪೀರ್ ಖಾ ಹಾವಿನ ಮಂತ್ರ ಹಾಕುವುದರಲ್ಲಿ ಬಲು ಗಟ್ಟಿಗ. ಅವನನ್ನು ನಾನೇ ಕರೆದುಕೊಂಡು ಬಂದೆ. ಸ್ವಲ್ಪ ಬೇವಿನಸೊಪ್ಪು ತರಿಸಿ ತನ್ನ ಚೌಕದ ಒಂದು ಸೆರಗನ್ನು ಗಂಟುಹಾಕಿ ಪಟಪಟನೆ ಮಂತ್ರ ಹಾಕಲು ಶುರು ಮಾಡಿದ. ಅಷ್ಟರಲ್ಲಿ ಪುಟ್ಟಮ್ಮ ಗೊಳೋ ಎಂದು ಅಳುತ್ತಾ 'ನಮ್ಮ ಅವ್ವ ಬದುಕಿಕೊಂಡರೆ ಅವಳಿಂದ ಯಾತ್ರೆ ಮಾಡಿಸ್ತೀನಿ, ದೇವರೆ' ಎಂದು ತಿರುಪತಿಗೆ ಹರಕೆ ಮಾಡಿಕೊಂಡು ಒಂದು ಅರಿಸಿನದ ಬಟ್ಟೆಯಲ್ಲಿ ಒಂದು ಪಾವಲಿಯನ್ನು ಕಟ್ಟಿ ರಂಗಮ್ಮನ ಎಡಗೈಗೆ ಕಟ್ಟಿದಳು. ಇಪ್ಪತ್ತು ನಿಮಿಷ ಪೀರ್ ಖಾ ಒಂದೇ ಉಸಿರಿಗೆ ಮಂತ್ರ ಹಾಕಿದ. ರಂಗಮ್ಮ 'ಹುಸ್' ಎಂದು ಕಣ್ಣು ಬಿಟ್ಟಳು. ಮೃತ್ಯುವಿನ ಬಾಯಿಂದ ಬದುಕಿಕೊಂಡಳು. ಮಾರನೆ ವರ್ಷ ಸಂಕ್ರಾಂತಿಯ ಹೊತ್ತಿಗೆ ನಮ್ಮೂರಿನಿಂದ ಅನೇಕರು ತಿರುಪತಿಗೆ ಹೊರಟರು. ಪುಟ್ಟಮ್ಮ ತಾಯಿಯನ್ನು 'ನೀನೂ ಯಾತ್ರೆ ಹೋಗು, ಅವರ ಜೊತೆಯಲ್ಲಿ. ನಾನು ಹರಕೆ ಮಾಡಿಕೊಂಡಿದ್ದೀನಿ, ನಿನಗೆ ಹಾವು ಕಚ್ಚಿದ್ದಾಗ' ಎಂದು ಬಲವಂತ ಮಾಡಿದಳು. ಮನಸ್ಸಿಲ್ಲದ ಮನಸ್ಸಿನಿಂದ ರಂಗಮ್ಮ ತಿರುಪತಿಗೆ ಯಾತ್ರೆ ಹೊರಟಳು. ಎಲ್ಲರೂ ರೈಲಿನಲ್ಲಿ ಬಂದು ತಿರುಪತಿಯನ್ನು ತಲಪಿದರು. ಆಗ ಛತ್ರಗಳಿರಲಿಲ್ಲ. ಯಾರದೊ ಮನೆಯಲ್ಲಿ ಅವರೆಲ್ಲ ಇಳಿದುಕೊಂಡರು. ಗೋವಿಂದರಾಯಸ್ವಾಮಿ ದೇವಸ್ಥಾನಕ್ಕೆ ಪೂಜೆಮಾಡಿಸುವುದಕ್ಕೆ ಹೋದರು. ಇವಳೂ ಅವರ ಹಿಂದೆ ಹೋದಳು. ನಾಲ್ಕು ನಾಲ್ಕು ಆಣೆ ಕೊಟ್ಟು ಇವಳು ವಿನಾ ಹೋಗಿದ್ದವರೆಲ್ಲ ಆರತಿ ಮಾಡಿಸಿದರು. ಅವರ ಆರತಿಯ ಬೆಳಕಿನಲ್ಲಿ ಇವಳೂ ದೇವರ ದರ್ಶನಮಾಡಿ ಬಂದಳು. ಹೋಗಿದ್ದವರಲ್ಲಿ ಒಬ್ಬಳು 'ನೀನು ಆರತಿ ಮಾಡಿಸು ರಂಗಮ್ಮ' ಎಂದಳು. 'ಅಯ್ಯೊ, ತೆಪ್ಪನೆ ಬಾರೆ. ನೀವು ಆರತಿ ಮಾಡಿಸ್ತಾ ಇರೋದು ದೇವರಿಗೆ ಸಾಲದೆ' ಎಂದಳು. ಮಾರನೆ ಬೆಳಗ್ಗೆ ಎಲ್ಲರೂ ನಡೆದುಕೊಂಡೆ ಗಿರಿಯನ್ನು ಹತ್ತಿದರು. ಬೆಟ್ಟ ಏರುತ್ತ ಏರುತ್ತ

ಇರುವಾಗ ಇವಳಿಗೆ ಕಾಲುಗಳು ಕಳಚಿ ಬಿದ್ದು ಹೋದಹಾಗೆ ಕಂಡಿತು. ಮೆಲ್ಲಮೆಲ್ಲನೆ ನಾಲ್ಕು ಮೈಲಿಯಷ್ಟು ದೂರ ಹತ್ತಿಹೋದರು. ಅಷ್ಟರಲ್ಲಿ ರಂಗಮ್ಮನಿಗೆ ಸುಸ್ತಾಗಿ ಹೋಗಿತ್ತು. ಜತೆಯಲ್ಲಿದ್ದ ಗಂಡಸರು ಇವಳ ಕೈ ಹಿಡಿದುಕೊಂಡು ಬೆಟ್ಟವನ್ನು ಹತ್ತಿಸಿಕೊಂಡು ಹೋಗುತ್ತಿದ್ದರು. 'ಈ ಹಾಳು ಬೆಟ್ಟ ಯಾರಪ್ಪಾ ಹತ್ತೋರು? ಏನು ಗ್ರಹಚಾರ ಇದು. ಊರಿನಲ್ಲಿ ಸುಖವಾಗಿರದೆ ಯಾಕೆ ಬಂದೆನೋ ಕಾಣೆ' ಎಂದು ಗೊಣಗುಟ್ಟುತ್ತಿದ್ದಳು.

"ಛೆ, ಛೀ, ಹಾಗಂದವರುಂಟೆ. ತೆಪ್ಪನೆ ಬಾರಮ್ಮ" ಎಂದ ಒಬ್ಬ. ಒಂದು ಕಡಿದಾದ ಕಮರಿಯ ಹತ್ತಿರ ಮರದ ನೆರಳಿನಲ್ಲಿ ಎಲ್ಲರೂ ಕುಳಿತುಕೊಂಡು ಸ್ವಲ್ಪ ಸುಧಾರಿಸಿಕೊಳ್ಳುತ್ತಿದ್ದರು. ರಂಗಮ್ಮ ಮೂತ್ರಿಸುವುದಕ್ಕೆ ಆ ಕಣಿವೆಯ ಪಕ್ಕಕ್ಕೆ ಹೋದಳು. ಕೆಳಗಡೆ ದೊಡ್ಡ ಕಮರಿ. ಒಂದು ಮರವನ್ನು ಹಿಡಿದುಕೊಂಡು ಅದರ ಭೀಕರ ದೃಶ್ಯವನ್ನು ನೋಡಲು ತಲೆಯನ್ನು ಸ್ವಲ್ಪ ಮುಂದಕ್ಕೆ ಚಾಚಿದಳು. ಕಣ್ಣುಗಳು ಮಂಜಾಗಿ ತಲೆ ತಿರುಗಿತು. ಕ್ಷಣದಲ್ಲೇ ಇಳಿಜಾರು ನೆಲಕ್ಕೆ ಬಿದ್ದು ಹಾಗೆಯೇ ಕೆಳಕ್ಕೆ ಉರುಳುತ್ತ ಚೀತ್ಕಾರ ಮಾಡಿ ಎಲ್ಲಿಯೊ ಆ ಕಂದರದಲ್ಲಿ ಮಾಯವಾದಳು. ಅವಳ ಚೀತ್ಕಾರ ಧ್ವನಿಯನ್ನು ಕೇಳಿ ಜನರು ಓಡಿಬಂದು ನೋಡುವಷ್ಟರಲ್ಲೆ ಮಾಯವಾಗಿದ್ದಳು. ಎಲ್ಲರೂ ದಿಕ್ಕು ತೋಚದೆ ಬೆವರತೊಡಗಿದರು. ಆ ಕಮರಿಯಲ್ಲಿ ಇಳಿದು ನೋಡಲು ಯಾರಿಗೂ ಧೈರ್ಯಬರಲಿಲ್ಲ. ಅದು ಅಸಾಧ್ಯವಾದ ಕೆಲಸ. ಬಹಳ ಹೊತ್ತಿನವರೆಗೆ ಚಿಂತಿಸುತ್ತ ಅಲ್ಲೇ ಕುಳಿತಿದ್ದು ದೇವಸ್ಥಾನಕ್ಕೆ ಹೋದರು. ನೋಡಪ್ಪಾ ಹೀಗಿದೆ, ದೇವರ ಮಹಿಮೆ!"

ನಾವೆಲ್ಲರೂ ಈ ವಿಚಿತ್ರ ಕಥೆಯನ್ನು ಮೂಕರಂತೆ ಕೇಳುತ್ತಾ ಕುಳಿತಿದ್ದೆವು. ಅನಂತರ ಊಟ ಮುಗಿಸಿ ಬಂದೆವು. ನಾನು ಹಿಂದೆ ಒಂದು ಸಾರಿ ತಿರುಪತಿಗೆ ಹೋಗಿದ್ದಾಗ ದೇವಸ್ಥಾನದ ಮುಂದೆ ಒಂದು ಪವಾಡ ನಡೆದಿದ್ದಿತು. ಅದು ಈಗ ನನ್ನ ನೆನಪಿಗೆ ಬಂದಿತು.

"ನಾನು ಕಣ್ಣಾರ ಕಂಡ ಒಂದು ವಿಚಾರವನ್ನು ಹೇಳುತ್ತೇನೆ. ಬನ್ನಿ, ಹತ್ತಿರಕ್ಕೆ" ಎಂದೆ ಸಿಂಗ್ರಪ್ಪನವರಿಗೆ.

"ಅದೇನು ? ಹೇಳಿ" ಎನ್ನುತ್ತ ನನ್ನ ಸಮೀಪಕ್ಕೆ ಬಂದರು.

"ನಾನು ಈಗ್ಗೆ ಆರು ವರ್ಷಗಳ ಹಿಂದೆ ತಿರುಪತಿಗೆ ಹೋಗಿದ್ದೆ. ಮಲೆಯ ಮೇಲಿರುವ ಶ್ರೀ ವೆಂಕಟರಮಣಸ್ವಾಮಿ ದೇವಸ್ಥಾನಕ್ಕೆ ಬೆಳಗಿನ

ಜಾವ ಐದು ಘಂಟೆಗೆ ನಡೆದುಕೊಂಡು ಹೊರಟೆ. ಬೆಟ್ಟವನ್ನು ಹತ್ತಿ ಸುಮಾರು ಒಂಬತ್ತು ಘಂಟೆಗೆ ದೇವಸ್ಥಾನವನ್ನು ತಲಪಿದೆ. ಆ ದಿನವೂ ಬಹುಮಂದಿ ಯಾತ್ರಿಕರು ಬಂದಿದ್ದರು. ಧರ್ಮದರ್ಶನಕ್ಕೆ ಹೋಗಬೇಕೆಂದು ಸ್ನಾನ ಮುಗಿಸಿ ದೇವಸ್ಥಾನದ ಹೊರಬಾಗಿಲಿಗೆ ಬಂದೆ. ಜನರು ಗುಂಪು ಕಟ್ಟಿಕೊಂಡು ತಲೆಗೆ ನೀರು ತಟ್ಟಿ ಗಾಳಿ ಬೀಸಿ, 'ಹರಕೆ ಮಾಡಿಕೊ' ಹಾಗೆ ಹೀಗೆ ಅನ್ನುತ್ತಿದ್ದ ಗದ್ದಲ ಕೇಳಿಸಿತು. ಕ್ಷಣಕ್ಷಣಕ್ಕೂ ಜನರ ಗುಂಪು ದೊಡ್ಡದಾಯಿತು. ನಾನು ಕುತೂಹಲದಿಂದ ಜನರ ಮಧ್ಯೆ ನುಗ್ಗಿ ಹೋಗಿ ನೋಡಿದೆ. ಲಕ್ಷಣವಾದ, ಏಳು ವರ್ಷ ವಯಸ್ಸಿನ ಹೆಣ್ಣು ಮಗು ನೆಲದ ಮೇಲೆ ಒದ್ದಾಡುತ್ತಿತ್ತು. ಅದರ ಬಾಯಿಂದ ಜೊಲ್ಲು ಸುರಿಯುತ್ತಿತ್ತು. ಆ ಮಗುವಿನ ತಂದೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಮಗುವಿನ ತಾಯಿ ಕಣ್ಣೀರಿನಿಂದ ಮಗುವಿನ ಶರೀರವನ್ನೆಲ್ಲ ನೆನೆಯಿಸಿಬಿಟ್ಟಿದ್ದಳು. ಒಬ್ಬ ಮುದುಕ ಆ ಮಗುವಿನ ತಂದೆಯನ್ನು,

'ಏನಪ್ಪ, ಸುಮ್ಮನೆ ಗೋಳಾಡಿದರೆ ಏನು ಪ್ರಯೋಜನ? ನಾನು ಒಂದು ಮಾತು ಕೇಳುತ್ತೇನೆ' ಎಂದ. ಆ ಮನುಷ್ಯ ಸುರಿಯುತ್ತಿದ್ದ ಕಣ್ಣೀರನ್ನು ಒರಸಿಕೊಂಡು ದೈನ್ಯ ದೃಷ್ಟಿಯನ್ನು ಬೀರುತ್ತ ಕುಂದಿದ ದನಿಯಿಂದ,

'ಅದು ಏನು ಯಜಮಾನರೆ? ಹೇಳಿ. ಇದು ಒಂದೇ ಒಂದು ಮಗು ನಮಗೆ' ಎಂದ.

'ಅದಿರಲಿ, ತಿರುಪತಿಗೆ ಯಾತ್ರೆ ಬರುವುದಕ್ಕೆ ಮೊದಲು ಏನಾದರು ಒಡವೆ ವಸ್ತ್ರ ಮಾಡಿಸಿ ಕಣಜಕ್ಕೆ ಹಾಕುತ್ತೇನೆಂದು ಹರಕೆ ಮಾಡಿಕೊಂಡಿದ್ದಿರಾ?'

'ಹಾಗೇನು ಮಾಡಿಕೊಂಡಹಾಗೆ ಜ್ಞಾಪಕವಿಲ್ಲ, ಯಜಮಾನರೆ.'

'ಚೆನ್ನಾಗಿ ಜ್ಞಾಪಿಸಿಕೊ. ಸುಮ್ಮನೆ ಹುಡುಗಾಟವಾಡಿದರೆ ನಿನ್ನ ಮಗು ಕೈಗೆ ಸಿಕ್ಕುವುದಿಲ್ಲ'

ಮಗುವಿನ ತಾಯಿ ಮಧ್ಯೆ ಬಾಯಿಹಾಕಿ 'ಹರಕೆ—ನಾನು ಮಾಡಿಕೊಂಡಿದ್ದೆ, ತಾತ' ಎಂದಳು ಗದ್ಗದ ಕಂಠದಿಂದ.

'ಏನಮ್ಮ ಅದು? ಮತ್ತೆ ಮೂಗರಂತೆ ಅಳುತ್ತಾ ಕುಳಿತಿದ್ದೀರಲ್ಲ!'

'ನನಗೆ ಮಕ್ಕಳಾದರೆ ಚಿನ್ನದ ಬಳೆಯನ್ನು ಮಾಡಿಸಿ ಕಣಜಕ್ಕೆ ಹಾಕುತ್ತೇನೆಂದು ಹರಕೆ ಮಾಡಿಕೊಂಡಿದ್ದೆ.'

'ಹಾಗಾದರೆ ಎಂಥ ಪೆಚ್ಚು ಕೆಲಸ ಮಾಡಿದಿರಿ! ಬಳೆ ತಂದಿದ್ದೀರಾ?'

'ಮಗುವಿನ ಕೈಯಲ್ಲೇ ಇವೆ, ತಾತ.'

'ಕಳಚಿಕೊಳ್ಳಮ್ಮ, ಸರ್‍ರನೆ.'

ಆ ಮಾತೆ ಒದ್ದಾಡುತಿದ್ದ ಮಗುವಿನ ಕೈಗಳಲ್ಲಿದ್ದ ಚಿನ್ನದ ಬಳೆಗಳನ್ನು ಸರಸರನೆ ಕಳೆದುಕೊಂಡು ದೇವಸ್ಥಾನದ ಒಳಗೆ ಹೋಗಿ ಕಣಜಕ್ಕೆ ಬಳೆಗಳನ್ನು ಹಾಕಿ ಕಣ್ಣೀರು ಸುರಿಸುತ್ತಲೆ ಬಂದಳು. ಆಕೆ ಬರುವಷ್ಟರಲ್ಲಿ ಮಗುವಿನ ಬಾಯಿಂದ ಸುರಿಯುತ್ತಿದ್ದ ಜೊಲ್ಲು ನಿಂತಿತು. ಐದು ನಿಮಿಷಗಳಲ್ಲಿ ಒದ್ದಾಡುತ್ತಿದ್ದುದೂ ನಿಂತಿತು. ಅನಂತರ ಮಗುವಿಗೆ ಪ್ರಜ್ಞೆ ಬಂದಿತು. ಈ ಪವಾಡವನ್ನು ನೋಡಿ ನನಗೆ ಆಶ್ಚರ್ಯವಾಯಿತು! ದೇವರ ಮೇಲೆ ಭಕ್ತಿ ಅಂಕುರಿಸುವುದಕ್ಕೆ ಬದಲು ಹೆದರಿಕೆಯುಂಟಾಯಿತು. ದೇವರು ಅನ್ನುವ ಶಬ್ದ ಕೇಳಿದರೆ ಹೆದರುತ್ತಿದ್ದೆ.

ಷೇಕ್ಸ್‌ಪಿಯರ್ ಮಹಾಕವಿ ಒಂದು ಕಡೆ ಹೇಳುತ್ತಾನೆ: 'The best sanctity lies in fear' ಎಂದು. ಆ ದೃಶ್ಯ ನೋಡಿದಂದಿನಿಂದ ದೇವರ ವಿಚಾರದಲ್ಲಿ ಯಾವುದೊ ಒಂದು ಹೇಳಲಾಗದ ಭಾವ ನನ್ನ ಮನಸ್ಸಿನ ಮೇಲೆ ಮುದ್ರೆ ಒತ್ತಿತು."

ನಮ್ಮ ರಂಗಸ್ವಾಮಿ, ಅವನ ತಾಯಿ ಮತ್ತು ಸಿಂಗ್ರಪ್ಪ ಎಲ್ಲರೂ ತೆರೆದ ಬಾಯಿಂದ ಕೇಳುತ್ತಿದ್ದರು.

"ಇದನ್ನು ಕೇಳುತ್ತಾ ಕೇಳುತ್ತಾ ನನ್ನ ಮೈ ಜುಂ ಎಂದಿತು" ಎಂದರು ಸಿಂಗ್ರಪ್ಪನವರು.

ಮಧ್ಯಾಹ್ನ ಎರಡು ಘಂಟೆಯವರೆಗೆ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡೆವು. ಸಿಂಗ್ರಪ್ಪನವರು "ಅಣ್ಣಿ ಎಂಬ ತಮಿಳು ಚಿತ್ರ ಬಹಳ ಚೆನ್ನಾಗಿದೆಯಂತೆ. ಮ್ಯಾಟನಿಗೆ ಹೋಗೋಣ" ಎಂದರು. ನಾನು "ಈ ಬಿಸಿಲಿನಲ್ಲಿ ಯಾರು ಹೋಗುತ್ತಾರೆ. ನಮ್ಮ ಮೈಸೂರಿನಲ್ಲಿ ಅನೇಕ ಚಿತ್ರಮಂದಿರಗಳಿವೆ. ಅಲ್ಲೇ ನೋಡಿದರೆ ಆಯಿತು" ಎಂದೆ. ಆದರೂ ಅವರ ಬಲವಂತಕ್ಕೆ ನಾವು ಹೊರಟೆವು. ಹೆಂಗಸರೂ ಮಕ್ಕಳೂ ಹೊರಟರು, 'ಟ್ರಾಂ' ನಲ್ಲಿ. ಎಲ್ಲರೂ ಒಂದು ಚಿತ್ರ ಮಂದಿರ ಮುಟ್ಟಿದೆವು. ಆಗ ಮೂರು ಘಂಟೆ. ಚಿತ್ರ ಮಂದಿರದ ಸುತ್ತಲೂ ಜನ ವಿಪರೀತವಾಗಿ ಟಿಕೆಟ್‌ಗಾಗಿ ಅಲೆದಾಡುತ್ತಿದ್ದರು. ಎಂಟು ಆಣೆ, ಹದಿನೈದು ಆಣೆ, ಒಂದೂವರೆ ರೂಪಾಯಿಯ ಟಿಕೆಟ್ ಕೊಡುವ

ಸ್ಥಳಗಳಂತು ಒಬ್ಬರ ಮೇಲೊಬ್ಬರು ನೂಕಿ ನೂಕಿ ಬೀಳುತ್ತಿದ್ದರು. ಕೆಲವ ರಿಗೆ ಷರಟುಗಳು ಹರಿದುಹೋಗಿದ್ದುವು — ಟಿಕೆಟ್ಟಿಗೆ ನುಗ್ಗುವಾಗ. ಟಿಕೆಟ್ಟನ್ನು ಕೊಂಡು ಕೆಲವರು ಎರಡಾಣೆ ನಾಲ್ಕಾಣೆ ಹೆಚ್ಚಿಗೆ ತೆಗೆದು ಕೊಂಡು ಹೊರಗಡೆ ಮಾರುತ್ತಿದ್ದರು. ಅದು ಸೋಮಾರಿಗಳಿಗೆ ಬಹು ಸುಲಭವಾದ ವ್ಯಾಪಾರ. ಸಿಂಗ್ರಪ್ಪನವರು ಒಂದೂವರೆ ರೂಪಾಯಿನ ಟಿಕೆಟ್ಟನ್ನು ಎಲ್ಲರಿಗೂ ಕೊಂಡರು. ಮಂದಿರದ ಒಳಗೆ ಹೋಗಿ ಕುಳಿತೆವು. ಸುಂದರವೂ ಭವ್ಯವೂ ಆದ ಕಟ್ಟಡ. ಮೂರೂವರೆ ಘಂಟೆಗೆ ಸರಿಯಾಗಿ ಇಂಡಿಯಾ ಸರ್ಕಾರದ ಡಾಕ್ಯುಮೆಂಟರಿ ಫಿಲ್ಮ್ ಪ್ರದರ್ಶನವಾಗತೊಡಗಿತು; ಕ್ಷಯರೋಗ ನಿವಾರಣೆಯ ವಿಷಯವಾಗಿ ರೋಗ ಹೇಗೆ ಇದ್ದಕ್ಕಿದ್ದ ಹಾಗೆ ಮನುಷ್ಯನ ಶ್ವಾಸಕೋಶಗಳಿಗೆ ತಗಲುತ್ತದೆ; ಎಷ್ಟು ಜಾಗ್ರತೆ ರೋಗ ವ್ಯಾಪಿಸಿ ಕೆಮ್ಮು, ಸಣ್ಣದಾಗಿ ಜ್ವರ ಬರತೊಡಗಿ, ಎಂಟು ಹತ್ತು ದಿನ ಗಳಲ್ಲೆ ಶರೀರ ನಶಿಸಿ ಹೋಗುತ್ತದೆಂಬುದು ವಿಶದವಾಗಿ ಪಾತ್ರಗಳ ಮೂಲಕ ಪ್ರದರ್ಶಿಸಲ್ಪಟ್ಟಿತು. ಆಸ್ಪತ್ರೆಯನ್ನು ನಿರ್ಜನವಾದ ಸ್ಥಳದಲ್ಲಿ ಕಟ್ಟಿ ರೋಗಿಗಳಿಗೆ ಪ್ರವೀಣರಾದ ವೈದ್ಯರಿಂದ ಚಿಕಿತ್ಸೆ ಮಾಡಿಸುವುದೂ ಪ್ರದರ್ಶಿಸಲ್ಪಟ್ಟಿತು.

ಅನಂತರ ಕಥೆ 'ಅಣ್ಣಿ (ಅತ್ತಿಗೆ)' ಮಧುರ ಸಂಗೀತದೊಡನೆ ಪ್ರಾರಂಭವಾಯಿತು. ಒಂದು ಸಂಸಾರದಲ್ಲಿ ತಾಯಿ ಸಾಯುವಾಗ ತನ್ನ ಕಿರಿಯ ಮಗನನ್ನು ಸೊಸೆಯ ಮಡಲಿನಲ್ಲಿಟ್ಟು 'ಈ ಮಗುವಿಗೆ ನೀನೆ ತಾಯಿ' ಎಂದು ಹೇಳುವಷ್ಟರಲ್ಲೆ ಕಣ್ಣು ಮುಚ್ಚಿಕೊಳ್ಳುತ್ತಾಳೆ. ಸದ್ಗುಣ ಸಂಪನ್ನೆಯಾದ ಸೊಸೆ ಅಂದಿನಿಂದ ಆ ಸಣ್ಣ ಹುಡುಗನನ್ನು ತನ್ನ ಮಗುವಿ ಗಿಂತಲೂ ಹೆಚ್ಚು ಮಮತೆಯಿಂದ ಸಾಕುತ್ತಾಳೆ. ಹುಡುಗ ತುಂಟನಾಗು ತ್ತಾನೆ. ಹುಡುಗನ ಮೇಲೆ ಊರಿನ ಜನರು ಅನೇಕ ಸಾರಿ ದೂರು ಹೇಳು ತ್ತಾರೆ. ಆಗ ಆ ಹುಡುಗನನ್ನು ಅತ್ತಿಗೆ ಚೆನ್ನಾಗಿ ಶಿಕ್ಷಿಸುತ್ತಾಳೆ. ಅವನ ಅಣ್ಣ ಕೋಪಗೊಂಡು ಆಸ್ತಿಯಲ್ಲಿ ಅರ್ಧಭಾಗವನ್ನು ಹುಡುಗನ ವಶಕ್ಕೆ ಕೊಟ್ಟು ತನ್ನ ಭಾಗದ ಮನೆಗೆ ಬರಕೂಡದೆಂದೂ, ತನ್ನ ಹೆಂಡತಿ ಆತನನ್ನು ಮಾತನಾಡಿಸಕೂಡದೆಂದೂ ಕಟ್ಟಪ್ಪಣೆ ಮಾಡುತ್ತಾನೆ. ಹುಡುಗ ಅತ್ತಿಗೆಯ ಮೇಲೆ ಅಗಾಧವಾದ ಪ್ರೀತಿ ಇಟ್ಟಿರುತ್ತಾನೆ. ಅತ್ತಿಗೆ ಮೈದುನನ ಮೇಲೆ ಪುತ್ರವಾತ್ಸಲ್ಯವನ್ನಿಟ್ಟಿರುತ್ತಾಳೆ. ಮೈದುನನ್ನು ಶಿಕ್ಷಿಸಿದ್ದಕ್ಕಾಗಿ ಆಕೆಗೆ ತುಂಬಾ ವ್ಯಸನವಾಗಿ ಮನೋವೇದನೆಯಿಂದ ಹಾಸಿಗೆ ಹಿಡಿಯು

ತ್ತಾಳೆ. ಹುಡುಗ ಮನೆಯಿಂದ ಹೊರಟು ಮದ್ರಾಸಿನ ಬೀದಿಬೀದಿಗಳಲ್ಲಿ ಅಲೆಯುತ್ತಿರುವಾಗ ಮೋಟಾರಿಗೆ ಸಿಕ್ಕಿ ಆಸ್ಪತ್ರೆಗೆ ಚಿಕಿತ್ಸೆಗಾಗಿ ಸಾಗಿಸಲ್ಪಡುತ್ತಾನೆ. ಈ ವಿಷಯವನ್ನು ಹೇಗೊ ತಿಳಿದ ಅತ್ತಿಗೆ ಅಲ್ಲಿಗೆ ಧಾವಿಸುತ್ತಾಳೆ. ಹೀಗೆ ನೀತಿದಾಯಕವಾದ ಕಥೆ ಇಂಪಾದ ಗಾನದಿಂದ ಹೆಣೆಯಲ್ಪಟ್ಟಿತ್ತು. ಛಾಯಾಗ್ರಹಣ, ಪಾತ್ರರಚನೆ ಬಹು ಚೆನ್ನಾಗಿತ್ತು. ಶ್ರೀಮತಿ ವರಲಕ್ಷ್ಮಿ ಎಂಬಾಕೆ ಕಥಾನಾಯಕಿಯಾಗಿ ತನ್ನ ಪಾತ್ರವನ್ನು ಕರುಣರಸದಿಂದ ತುಂಬಿ ಅಭಿನಯಿಸಿದ್ದಳು. ಆರೂಕಾಲು ಘಂಟೆಯ ಸುಮಾರಿಗೆ ಚಿತ್ರ ಮುಗಿಯಿತು. ಅಲ್ಲಿಂದ ಹೊರಟು ನಾವು ಕೆಲವು ದೊಡ್ಡ ದೊಡ್ಡ ಬೀದಿಗಳಲ್ಲಿ ಸುತ್ತಾಡಿದೆವು. ಮನೆಗೆ ಬಂದು ಊಟ ಮುಗಿದ ಕೂಡಲೆ ರೈಲ್ವೆ ನಿಲ್ದಾಣಕ್ಕೆ ಹೊರಟೆವು.

ನಾವು ಕೇಂದ್ರ ರೈಲ್ವೆ ನಿಲ್ದಾಣವನ್ನು ತಲಪಿದಾಗ ಸರಿಯಾಗಿ ಎಂಟು ಘಂಟೆಯಾಗಿತ್ತು. ನಮ್ಮ ಸಿಂಗ್ರಪ್ಪನವರು ಬೆಂಗಳೂರಿಗೆ ನಮಗಾಗಿ ಟಿಕೆಟ್ಟನ್ನು ಕೊಂಡರು. ಬೊಂಬಾಯಿ ಕಲ್ಕತ್ತಾ ನಗರಗಳಿಗೆ ಹೋಗುವ ಗಾಡಿಗಳು ಬಂದು ನಿಂತಿದ್ದುವು. ಬೆಂಗಳೂರಿಗೆ ಹೋಗುವ ಮೆಯಿಲ್ ಗಾಡಿ ಎಂಟೂವರೆ ಘಂಟೆಗೆ ಸರಿಯಾಗಿ ಫ್ಲಾಟ್‌ಫಾರಂಗೆ ಬಂದಿತು. ಅದು ಬರುತ್ತಿದ್ದ ಹಾಗೆಯೆ ಪ್ರಯಾಣಿಕರೆಲ್ಲ ಪ್ರತಿಯೊಂದು ಪೆಟ್ಟಿಗೆಗೂ ನೇತು ಹಾಕಿಕೊಂಡರು. ಸಿಂಗ್ರಪ್ಪನವರು ರೈಲಿನಲ್ಲಿ ಜಾಗ ಹಿಡಿಯುವುದರಲ್ಲಿ ಗಟ್ಟಿಗರು. ಅವರೂ ಒಂದು ಪೆಟ್ಟಿಗೆಗೆ ಜೋಲು ಬಿದ್ದು ಪುಸಕ್ಕನೆ ಒಳಕ್ಕೆ ನುಗ್ಗಿ, ನಮ್ಮ ಸಾಮಾನನ್ನೆಲ್ಲ ಅಲ್ಲಿ ಇಟ್ಟು ಬಿಗಿಯಾಗಿ ಕುಳಿತರು. ಗಾಡಿ ನಿಂತ ಮೇಲೆ ನಾವು ಮೂವರೂ ಕುಳಿತೆವು. ಅವರು ಕೆಳಗೆ ಇಳಿದು ಬಂದು ರಂಗಸ್ವಾಮಿಗೆ ಸೋಡ, ಲೆಮನ್‌ಜೂಸ್ ಎಂದು ಹೇಳುತ್ತಿದ್ದ, ಸಕ್ಕರೆ ಮತ್ತು ಬಣ್ಣ ಬೆರಸಿದ ನೀರನ್ನು ಕೊಂಡು ಕುಡಿಸಿದರು. ಗಾಡಿ ಒಂಬತ್ತು ಘಂಟೆಗೆ ಸರಿಯಾಗಿ ಹೊರಟಿತು. ನಮ್ಮನ್ನು ಕಳುಹಿಸಿಕೊಟ್ಟು ಸಿಂಗ್ರಪ್ಪನವರು ಅಲ್ಲೇ ನಿಂತರು. ರೈಲು ದೂರವಾದಂತೆಲ್ಲ ಅವರು ನಮಗೆ ಕಾಣದಂತಾದರು. ಕಿಟಕಿಯ ಮುಖಾಂತರ ಬೀಸುತ್ತಿದ್ದ ತಂಗಾಳಿಯ ಹಿತಕ್ಕೆ ಮಾಯದಲ್ಲಿ ನನಗೆ ನಿದ್ದೆ ಹತ್ತಿತು. ರಂಗಸ್ವಾಮಿಯೂ ಮಲಗಿಬಿಟ್ಟ. ಬೆಳಗಿನಏಳು ಘಂಟೆಗೆ ಬೆಂಗಳೂರು ರೈಲ್ವೆ ನಿಲ್ದಾಣಕ್ಕೆ ಗಾಡಿ ತಲಪಿದಾಗಲೆ ನನಗೆ ಎಚ್ಚರವಾದದ್ದು. ಮೈಸೂರಿಗೆ ಹೊರಡಲು ಕಾದು ನಿಂತಿದ್ದ ಮೆಯಿಲ್ ಗಾಡಿಯಲ್ಲಿ ಅವಸರವಾಗಿ ಬಂದು ಕುಳಿತೆವು. ಮಧ್ಯಾಹ್ನ

ಹನ್ನೊಂದುವರೆ ಘಂಟೆಗೆ ಮೈ ಕೂದಲೂ ನೋವಾಗದಂತೆ ಭಗವಂತನ ದಯೆಯಿಂದ ಮೈಸೂರನ್ನು ತಲಪಿದೆವು.

ಓಂ ! ಶಾಂತಿಃ ! ಶಾಂತಿಃ ! ಶಾಂತಿಃ !

---

## ಇದೇ ಲೇಖಕರ ಇತರ ಕೃತಿಗಳು

೧. ಮುರಿದ ಮದುವೆ — ೧.೫೦
[ಕಾದಂಬರಿ]

೨. ನೊಂದಜೀವ — ೧.೭೫
[ಹರಿಜನರ ಜೀವನ ಚಿತ್ರ]

೩. ಬುದ್ಧದೇವ — ೧.೨೫

೪. ಮಗಳ ಮಾಂಗಲ್ಯ — ೧.೫೦



ತಿರುಪತಿ ಬೆಟ್ಟದ ಮೇಲಿನ ದೇಗುಲದ ದೃಶ್ಯ.